# ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಸ್ಮಾರಕಗಳು

(ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ನಿಬಂಧ)


ಸಂಶೋಧಕಿ

ಸಾಝೀಯಾ ಖಾಜಿ

ಮಾರ್ಗದರ್ಶಕರು

ಡಾ. ವಿರೂಪಾಕ್ಷಿ ಪೂಜಾರಹಳ್ಳಿ

ಪ್ರವಾಚಕರು





ಚರಿತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



೨೦೦೭

# ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಸ್ಮಾರಕಗಳು

(ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ನಿಬಂಧ)

ಸಂಶೋಧಕಿ

ನಾಝೀಯಾ ಖಾಜಿ



ಮಾರ್ಗದರ್ಶಕರು

ಡಾ. ವಿರೂಪಾಕ್ಷಿ ಪೂಜಾರಹಳ್ಳಿ

ಪ್ರವಾಚಕರು



ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಪ್ರಮಾಣ ಪತ್ರ

"ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ ಇಸ್ಲಾಮಿಕ್ ವಾಸ್ತು ಶೈಲಿಯ ಸ್ಮಾರಕಗಳು" ಚಾರಿತ್ರಿಕ ಅಧ್ಯಯನ ಎಂಬ ನಿಬಂಧವನ್ನು ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ನಾಝೀಯಾ ಖಾಜಿ
ಸಂಶೋಧಕಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 20-02-2002

ಸ್ಥಳ : ವಿದ್ಯಾರಣ್ಯ

# ದೃಢೀಕರಣ ಪತ್ರ

"ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ ಇಸ್ಲಾಮಿಕ್ ವಾಸ್ತು ಶೈಲಿಯ ಸ್ಮಾರಕಗಳು" ಚಾರಿತ್ರಿಕ ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಕು.ನಾಝೀಯಾ ಖಾಜಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ.ವಿರೂಪಾಕ್ಷಿ ಪೂಜಾರಹಳ್ಳಿ
ಪ್ರವಾಚಕರು ಮತ್ತು ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 20-02-2002
ಸ್ಥಳ : ವಿದ್ಯಾರಣ್ಯ

## ಕೃತಜ್ಞತೆಗಳು

"ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ ಇಸ್ಲಾಮಿಕ್ ವಾಸ್ತು ಶೈಲಿಯ ಸ್ಮಾರಕಗಳು; ಚಾರಿತ್ರಿಕ ಅಧ್ಯಯನ" ಈ ವಿಷಯ ಕುರಿತು ಅಧ್ಯಯನ ಮಾಡುವ ಮತ್ತು ನಿಬಂಧವನ್ನು ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಲು ಅವಕಾಶ ಕಲ್ಪಿಸಿಕೊಟ್ಟ, ಮಾನ್ಯ ಕುಲಪತಿಗಳಾದ ಬಿ.ಎ. ವಿವೇಕ ರೈ ಮತ್ತು ಕುಲಸಚಿವರಾದ ವಿ.ಶಂಕರ್ ಅವರಿಗೆ, ನಿಬಂಧದ ವಿಷಯವನ್ನು ಸೂಚಿಸಿ ಸೂಕ್ತ ಸಲಹೆ, ಸೂಚನೆಗಳೊಂದಿಗೆ ಮಾರ್ಗದರ್ಶನವನ್ನು ನೀಡಿದ ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರಿಗೆ, ಅಧ್ಯಯನದ ಅವಧಿಯಲ್ಲಿ ಚರಿತ್ರೆಯ ವಿವಿಧ ಆಯಾಮಗಳನ್ನು ಬೋಧಿಸಿದ ಚರಿತ್ರೆ ವಿಭಾಗದ ಮುಖ್ಯಸ್ಥರಾದ ಡಾ. ಮೋಹನಕೃಷ್ಣ ರೈ, ಪ್ರೊ.ಲಕ್ಷ್ಮಣ್ ತೆಲಗಾವಿ, ಪ್ರೊ. ಟಿ.ಪಿ. ವಿಜಯ್, ಡಾ. ಸಿ.ಆರ್. ಗೋವಿಂದರಾಜು, ಡಾ.ಎಸ್.ಚಿನ್ನಸ್ವಾಮಿ ಸೋಸಲೆ ಅವರಿಗೆ ಅನಂತ ಕೃತಜ್ಞತೆಗಳು.

ಕ್ಷೇತ್ರಕಾರ್ಯ ಮತ್ತು ಫೋಟೋಗ್ರಫಿ ಮಾಡುವಲ್ಲಿ ಸೂಕ್ತ ಸಲಹೆ, ಮಾಹಿತಿಯನ್ನು ಕೊಟ್ಟ ಡಿ.ಹುಸೇನ್ ಅವರಿಗೆ, ಅದೇ ರೀತಿಯಲ್ಲಿ ಮಾಹಿತಿಯನ್ನು ಕೊಟ್ಟ ಜೈನುಲ್ಲಾ ಬಳ್ಳಾರಿ ಅವರಿಗೆ ಮತ್ತು ಸತ್ಯನಾರಾಯಣ ಅವರಿಗೆ, ವಿಶ್ವವಿದ್ಯಾಲಯದ ಗ್ರಂಥಾಲಯ ಅಧ್ಯಯನ ಮಾಡಲು ಅನುಕೂಲಕರ ವಾತಾವರಣವನ್ನು ಒದಗಿಸಿದಕೊಟ್ಟ ಮುಖ್ಯ ಗ್ರಂಥಪಾಲಕರಿಗೆ, ಚರಿತ್ರೆ ವಿಭಾಗದ ಬೋಧಕೇತರ ಸಿಬಂಧಿಗಳಾದ ಸೋಮಶೇಖರ ಕಣವಿ, ಗಂಗಾಧರ ಅವರಿಗೆ, ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ರತ್ನ, ರಾಚಮ್ಮ ಮತ್ತು ನನ್ನೆಲ್ಲಾ ಸ್ನೇಹಿತರಿಗೆ, ಅಂದವಾದ ಛಾಯಾಚಿತ್ರಗಳನ್ನು ತೆಗೆದುಕೊಟ್ಟ ರಾಘವೇಂದ್ರ ಮತ್ತು ಅಚ್ಚುಕಟ್ಟಾಗಿ ಅಕ್ಷರ ಸಂಯೋಜಿಸಿದ ಫಾಂಟ್‌ಲೈನ್ ಗ್ರಾಫಿಕ್ಸ್‌ನ ಜಿ. ಉಲ್ಲಾಸ್ ಅವರಿಗೆ, ಸದಾ ಮಗಳ ಏಳ್ಗೆಯನ್ನು ಬಯಸುವ ತಂದೆ-ತಾಯಿಯರಾದ ಮಹಮ್ಮದ್ ಅಖ್ತರ್ ಅಲಿಖಾಜಿ ಮತ್ತು ತಾಜುನೀಸಾ ಖಾಜಿ ಅವರಿಗೆ, ಚಿಕ್ಕಮ್ಮ-ಚಿಕಪ್ಪಂದಿರಿಗೆ, ಮಾಮಾ-ಮಾಮಿಯರಿಗೆ, ತಮ್ಮ-ತಂಗಿಯರಾದ ನುಸರತ್, ನಫೀಸಾ, ನಾಫೀಯಾ, ಜೊಹೇಬ, ಜುಬೇರ, ಜಫರ್, ಜಮೀರ್ ಹಾಗೂ ಅಕ್ಕ-ತಂಗಿಯರಿಗೆ, ಅಣ್ಣ-ತಮ್ಮಂದಿರಿಗೆ, ಒಟ್ಟು ನನ್ನ ಕುಟುಂಬದ ವರ್ಗದವರಿಗೆ ತುಂಬು ಹೃದಯದ ಕೃತಜ್ಞತೆಗಳು.

ನಾಝಿಯಾ ಖಾಜಿ

ಪರಿವಿಡಿ

ಅಧ್ಯಾಯ ಐದು

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

### ಅಧ್ಯಯನದ ಉದ್ದೇಶ

ಕಲೆಯು ಮಾನವನ ಅತೀ ಸೂಕ್ಷ್ಮ ಚೇತನದ ಫಲ ಮತ್ತು ಅದು ಯಾವುದೇ ಸಮಾಜ, ಸಂಸ್ಕೃತಿಯ ಬೇರು. ಕಲೆಯು ಮಾನವನ ಜ್ಞಾನ ಮತ್ತು ಕೌಶಲ್ಯಗಳ ಅರುಣೋದಯ ರೂಪವೂ ಹೌದು. ಚರಿತ್ರೆ ಪೂರ್ವ ಕಾಲದ ಮಾನವನು ತನ್ನ ಕಲಾ ಪ್ರತಿಭೆಯನ್ನು ಕಲ್ಲು ಬಂಡೆಗಳ ಮೇಲೆ ಪ್ರದರ್ಶಿಸಿದ್ದಾನೆ. ಹಾಗೆಯೇ ಇತಿಹಾಸ ಕಾಲದಿಂದ ವಿಜಯನಗರದವರೆಗೂ ಈ ಬಗೆಯ ರೇಖಾಚಿತ್ರ, ಚಿತ್ರಕಲೆ, ವಾಸ್ತುಶಿಲ್ಪವನ್ನು ಮಾನವ ಸಮುದಾಯ ತಲೆತಲಾಂತರದಿಂದ ಉಳಿಸಿಕೊಂಡು ಬಂದಿರುವುದನ್ನು ಇಂದಿಗೂ ನೋಡಬಹುದು.

ವಿಜಯನಗರ ಸಾಮ್ರಾಜ್ಯವು ಕ್ರಿ.ಶ. ೧೩೩೬ರಲ್ಲಿ ಸ್ಥಾಪನೆಯಾಯಿತು. ಅಂದಿನಿಂದ ಸಂಗಮ (೧೩೩೬ರಿಂದ-೧೪೮೫), ಸಾಳುವ (೧೪೮೫-೧೫೦೬), ತುಳುವ (೧೫೦೬-೧೫೭೦) ಮತ್ತು ಅರವೀಡು (೧೫೭೦-೧೬೫೬) ಎಂಬ ನಾಲ್ಕು ವಂಶಗಳು ಆಳ್ವಿಕೆ ನಡೆಸಿವೆ. ವಿಜಯನಗರ ಚರಿತ್ರೆಯ ಮಡಿಲಲ್ಲಿ ತಲೆ ಎತ್ತಿದ ವಾಸ್ತುಶಿಲ್ಪ ಸ್ಮಾರಕಗಳು ತನ್ನ ಸೌಂದರ್ಯದಿಂದ ಇಲ್ಲಿಯವರೆಗೆ ವಿಶ್ವದೆಲ್ಲೆಡೆ ಚಿರಪರಿಚಿತವಾಗಿವೆ. ಅಂದಿನ ಕಾಲದ ಗತವೈಭವವನ್ನು ಸಾರುವ ವಿಜಯನಗರದ ಸ್ಮಾರಕಗಳು ಜಗತ್ತಿನ ಪ್ರವಾಸಿಗರನ್ನು ಮನತೂಗುವಂತೆ ಮಾಡಿವೆ. ಈ ಹಿನ್ನೆಲೆಯಲ್ಲಿ ವಿಜಯನಗರ ವಾಸ್ತುಶಿಲ್ಪದಲ್ಲಿ ಇಸ್ಲಾಮಿಕ್ ವಾಸ್ತುಶಿಲ್ಪದ ಮಹತ್ವ, ಪ್ರಾಮುಖ್ಯತೆಯನ್ನು ಇಲ್ಲಿ ವಿಶ್ಲೇಷಿಸುವ ಗುರಿಯಿದೆ.

ಹಂಪಿಯು ಪ್ರಕೃತಿ ಮತ್ತು ಕಲಾ ಸೌಂದರ್ಯದ ತವರೂರು. ಈ ಪ್ರದೇಶವು ಬೆಟ್ಟ ಸಾಲುಗಳ ಮಧ್ಯೆ ಇದ್ದು ಕಿಷ್ಕಿಂಧೆ ಎಂದು ಪ್ರಸಿದ್ಧಿಯಾದ ಹೆಸರನ್ನು ಪಡೆದಿದೆ. ತುಂಗಭದ್ರಾ ನದಿ ತೀರದ ಹಂಪಿ ಪ್ರದೇಶದಲ್ಲಿ ಅಸಾಮಾನ್ಯ ಕಂದು ಇಲ್ಲವೇ ಬೂದು ವರ್ಣದ ಗ್ರಾನೈಟ್ ಶಿಲೆಯ ಬೆಟ್ಟಗಳು ಇರುವುದರ ಬಗ್ಗೆ ಅನೇಕ ದೇಶಿಯ ಹಾಗೂ ವಿದೇಶಿ ಯಾತ್ರಿಕರ ಬರವಣಿಗೆಗಳಿಂದ ತಿಳಿಯಬಹುದಾಗಿದೆ. ನಿಕೊಲೆ-ಡಿ-ಕೊಂಟಿ (ಇಟಲಿ), ಅಬ್ದುಲ್ ರಜಾಕ್ (ಪರ್ಶಿಯಾ), ಅಥನೇಶಿಯಸ ನಿಕಿಟಿನ (ರಶಿಯಾ), ವಾರ್ಥೆಮ್ (ಇಟಲಿ), ಡುರೇಟ ಬಾರ್ಬೋಸ್ (ಪೋರ್ಚುಗಲ್), ಡೊಮಿಂಗೋ ಫೇಸ್ (ಪೋರ್ಚುಗಲ್), ನ್ಯೂನಿಜ್ (ಪೋರ್ಚುಗಲ್), ಸಿಸಿರೋ ಫ್ರೆಡರಿಕ್ (ಇಟಲಿ) ಮೊದಲಾದ ವಿದೇಶಿ ಯಾತ್ರಿಕರು ವಿಜಯನಗರವನ್ನು ಸಂದರ್ಶಿಸಿದ್ದರು. ಈ ಬಗ್ಗೆ ಇತಿಹಾಸ ತಿಳಿಸುವ ಅತ್ಯಂತ ಗಣ್ಯ ಸಂದರ್ಶಕನೆಂದರೆ ಪರ್ಶಿಯಾದ ಅಬ್ದುಲ್ ರಜಾಕ್. ಈತನು ಕ್ರಿ.ಶ. ೧೪೪೨ರಲ್ಲಿ ಇಮ್ಮಡಿ ದೇವರಾಯನ ಕಾಲದಲ್ಲಿ ಭಾರತಕ್ಕೆ ಪರ್ಶಿಯಾದ ರಾಯಭಾರಿಯಾಗಿ ಬಂದು, ವಿಜಯನಗರಕ್ಕೆ ಭೇಟಿ ನೀಡಿದನು. ತನ್ನ ಪ್ರವಾಸಿ ಕಥನದಲ್ಲಿ ಅಬ್ದುಲ್ ರಜಾಕ್ ಸಾಕಷ್ಟು ಮಹತ್ವದ ಮಾಹಿತಿಯನ್ನು ದಾಖಲಿಸಿದ್ದಾನೆ.

ಹಂಪಿ ಮತ್ತು ವಿಜಯನಗರ ಸಾಮ್ರಾಜ್ಯ ಕುರಿತಂತೆ ಇತ್ತೀಚೆಗೆ ಅಧ್ಯಯನ, ಸಂಶೋಧನೆಗಳು ನಡೆದ ಬಗ್ಗೆ ಸೂಕ್ಷ್ಮವಾಗಿ ಇಲ್ಲಿ ವಿಶ್ಲೇಷಿಸಲಾಗುವುದು. ರಾಜಕೀಯ, ಧಾರ್ಮಿಕ, ಮೋಕ್ಷ ಹಾಗೂ ತ್ಯಾಗಮಯ ಕ್ಷೇತ್ರವಾದ ಹಂಪಿ ನಾನಾ ಬಗೆಯಲ್ಲಿ ಖ್ಯಾತಿ ಪಡೆದಿರುವುದು ಗಮನಾರ್ಹ. ಹಂಪೆ ಕ್ಷೇತ್ರವನ್ನು ಕುರಿತಂತೆ ವಿಪುಲ ಅಧ್ಯಯನಗಳು ನಡೆದಿವೆ. ವಿಜಯನಗರ ಕಾಲದಲ್ಲಿ ಹಂಪಿಯನ್ನು ಕನ್ನಡ-ತೆಲುಗು ಇತರ ಭಾಷೆಗಳ ಕವಿಗಳು ಪರಿಚಯಿಸಿದ್ದು ಒಂದೆಡೆಯಾದರೆ, ವಿದೇಶಿ ಯಾತ್ರಿಕರು ಸಮಕಾಲೀನ ಬರಹಗಾರರು ಮತ್ತೊಂದೆಡೆ ಪರಿಚಯಿಸಿದ್ದಾರೆ. ಶಾಸನ, ಶಿಲ್ಪ, ಸ್ಮಾರಕ, ನಾಣ್ಯ, ಕಾವ್ಯ ಇತರ ಆಕರಗಳಲ್ಲಿ ಅಂದಿನ ಜನ-ಜೀವನದ ಚಿತ್ರಣವನ್ನು ಚಿತ್ರಿಸಿದ್ದಾರೆ.

ವಿಜಯನಗರೋತ್ತರ ಹಾಗೂ ಬ್ರಿಟಿಷರ ಕಾಲದಲ್ಲಿ ಹಂಪೆ ಹಾಗೂ ವಿಜಯನಗರ ಸಾಮ್ರಾಜ್ಯವನ್ನು ಕುರಿತು ಅನೇಕ ವಿದ್ವಾಂಸರು ಪರಿಚಯಿಸಿದ್ದಾರೆ. ಈ ಬಗ್ಗೆ ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ ಅನೇಕ ಬಗೆಯ ಸಂಶೋಧನೆಗಳಾಗಿವೆ. ಪ್ರಮುಖವಾಗಿ ಇ.ಸಿ.ರಾಪೆನ್ ಷಾ, ಸರ್. ಥಾಮಸ್ ಮನ್ರೋ, ಎಫ್.ಡಬ್ಲ್ಯು, ರಾಬರ್ಟ್‌ಸನ್, ರಾಬರ್ಟ್ ಸಿವೆಲ್, ಲಾಂಗ್‌ಹರ್ಸ್ಟ್, ಬರ್ಟನ್ ಸ್ಟೈನ್, ಜಾರ್ಜ್‌ಮಿಶೆಲ್, ಜಾನ್‌ಫಿಡ್ಜ್, ವಸುಂಧರಾ ಫಿಲಿಯೋಜಾ, ಅನಿಲಾಪರ್ಗೀಸ್ ಮೊದಲಾದವರ ಅಧ್ಯಯನಗಳು ಇಲ್ಲಿ ಪರಿಗಣನಾರ್ಹ.

ಅದೇ ರೀತಿ ದಕ್ಷಿಣ ಭಾರತದ ಇತಿಹಾಸಕಾರರು ಹೊಸ ಸಂಶೋಧನೆಗಳನ್ನು ಕೈಗೊಂಡಿರುತ್ತಾರೆ. ಅವರುಗಳೆಂದರೆ ಕರ್ನಾಟಕದಲ್ಲಿ ಡಾ.ಪಿ.ಬಿ.ದೇಸಾಯಿ, ಆರ್.ಎಸ್.ಪಂಚಮುಖಿ, ಡಾ.ಶ್ರೀನಿವಾಸ ರಿತ್ತಿ, ಬಿ.ಸೂರ್ಯನಾರಾಯಣರಾವ್, ಎನ್.ವೆಂಕಟರಮಣಯ್ಯ, ಎಸ್.ಶ್ರೀಕಂಠಯ್ಯ, ಟಿ.ವಿ.ಮಹಾಲಿಂಗಂ, ಓ.ರಾಮಚಂದ್ರಯ್ಯ, ಡಾ.ಜಿ.ಎಸ್.ದೀಕ್ಷಿತ್, ಡಾ.ಕೆ.ಶ್ರೀಕಂಠಶಾಸ್ತ್ರಿ, ಡಾ.ವಿ.ಎಸ್.ಆಲ್ತೇಕರ್,

ಕೆ.ಎ.ನೀಲಕಂಠಶಾಸ್ತ್ರಿ, ಡಾ.ಅ.ಸುಂದರ, ಡಾ.ಎಸ್.ರಾಜಶೇಖರ, ಡಾ.ಕೆ.ಆರ್.ಬಸವರಾಜ ಮೊದಲಾದವರು ಸಮಗ್ರ ಅಧ್ಯಯನ ಮಾಡಿರುವುದು ಸ್ಪಷ್ಟ. ಇನ್ನು ಕೆಲವು ಇತಿಹಾಸಕಾರರು ಬಿಡಿಬಿಡಿ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ.

೧೯೦೦ರಲ್ಲಿ ರಾಬರ್ಟ್ ಸಿವೆಲ್, ೧೯೦೫ರಲ್ಲಿ ಬಿ.ಸೂರ್ಯನಾರಾಯಣರಾವ್, ೧೯೧೬ರಲ್ಲಿ ರಾಮಸ್ವಾಮಿ ಅಯ್ಯಂಗಾರ್, ಕೆ.ಈಶ್ವರದತ್ತ, ಆಲೂರು ವೆಂಕಟರಾಯ, ೧೯೩೧ರಲ್ಲಿ ಪಿ.ಕುಲಕರ್ಣಿ ಮೊದಲಾದವರ ಸಂಶೋಧನೆಗಳು ಮೂಲಭೂತ ಸಮಸ್ಯೆಗಳನ್ನು ಕುರಿತಂತವು. ಟಿ.ವಿ.ಮಹಾಲಿಂಗಂ (ಆರ್ಥಿಕ ಇತಿಹಾಸ) ಮೊದಲಾದ ಲೇಖಕರು ಗಮನಾರ್ಹ ಸಾಧನೆ ಮಾಡಿದ್ದಾರೆ. ೧೯೬೧ರಲ್ಲಿ ಹಂಪಿ-ಆನೆಗೊಂದಿ ಪರಿಸರದ ಸ್ಮಾರಕ, ಚರಿತ್ರೆ, ಸಂಸ್ಕೃತಿಯನ್ನು ಡಾ.ಅ.ಸುಂದರ ಅವರು ಬೆಳಕಿಗೆ ತಂದಿದ್ದಾರೆ. ಕೆ.ವೆಂಕಟರಾಮಪ್ಪ, ಡಾ.ಎ.ವಿ.ವೆಂಕಟರತ್ನಂ, ನಿರುಪಮಾ, ಡಾ.ಜಿ.ಎಸ್.ದೀಕ್ಷಿತ್, ಸಿ.ಟಿ.ಎಂ.ಕೊಟ್ರಯ್ಯ, ಕೆ.ಎಸ್.ಶಿವಣ್ಣ ಮೊದಲಾದ ಇತಿಹಾಸಕಾರರು ರಾಜಕೀಯ, ಆರ್ಥಿಕ, ಸಾಂಸ್ಕೃತಿಕ, ಕಲಾ, ಸಾಹಿತ್ಯ ಹಾಗೂ ಮೌಖಿಕ ಇತಿಹಾಸ ಕುರಿತಂತೆ ಈ ಕ್ಷೇತ್ರದಲ್ಲಿ ಅಧ್ಯಯನ ಮಾಡಿದ್ದಾರೆ.

ಹಂಪಿಯ ಪರಿಸರವು ಪುರಾತತ್ವ, ಚಾರಿತ್ರಿಕ ಮತ್ತು ಧಾರ್ಮಿಕವಾಗಿ ವೈವಿಧ್ಯಮಯ ಕ್ಷೇತ್ರವಾಗಿರುವುದು ಒಂದು ವಿಸ್ಮಯ. ಕರ್ನಾಟಕ ಸರಕಾರ ೧೯೮೧ರಲ್ಲಿ ಹಂಪಿ ಪುನರುತ್ಥಾನ ಯೋಜನೆ ಮೂಲಕ ಉತ್ಖನನ ಆರಂಭಿಸಿತು. ಇದರ ಫಲವಾಗಿ ವಿಜಯನಗರ ಕಾಲದ ಸಹಸ್ರಾರು ಶಾಸನಗಳು ಬೆಳಕಿಗೆ ಬಂದವು. ಹಂಪಿಯ ಪರಿಸರದಲ್ಲಿ ನವಶೋಧಿತ ಶಾಸನಗಳಲ್ಲಿ ಸುಮಾರು ೩೮ ಶಾಸನಗಳನ್ನು ಡಾ.ಟಿ.ಎಂ.ಮಂಜುನಾಥಯ್ಯನವರು ಬೆಳಕಿಗೆ ತಂದಿರುವರು. ಕೆಳದಿಗುಂಡಾಜೋಯಿಸರು ವಿಜಯನಗರ ಚರಿತ್ರೆ ಮತ್ತು ಸಂಸ್ಕೃತಿಗೆ ತಮ್ಮದೇ ಆದ ಕಾಣಿಕೆ ಸಲ್ಲಿಸಿದ್ದಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ ಡಾ.ದೇವರಕೊಂಡಾರೆಡ್ಡಿಯವರು ವಿಜಯನಗರ ಸಾಮ್ರಾಜ್ಯದ ಸಂಬಂಧ ಕುರಿತು ಲೇಖನದಲ್ಲಿ ಹೊಸಬೆಳಕು ಚೆಲ್ಲಿದ್ದಾರೆ. ಹಂಪಿ ಸ್ಮಾರಕಗಳು ವಿವಿಧ ಸಂದರ್ಭದಲ್ಲಿ ವ್ಯಕ್ತಿಗಳಿಗೆ ಪ್ರೇರಣೆ ನೀಡಿದ ಸಂಗತಿಯನ್ನು ಪ್ರೊ.ಲಕ್ಷ್ಮಣ್ ತೆಲಗಾವಿಯವರು ಅನೇಕ ಮಹಾನುಭಾವರನ್ನು ಉದಾಹರಿಸಿದ್ದಾರೆ. ಇವರು ವಿಜಯನಗರ ಕಾಲದ ನಾಣ್ಯ, ಶಾಸನ, ಶಿಲ್ಪ ಹಾಗೂ ಸಾಹಿತ್ಯ ಕೃತಿಗಳ ಬಗ್ಗೆ ಅಪಾರ ಕಾಳಜಿಯಿಂದ ಶೋಧನೆ ಕಾರ್ಯದಲ್ಲಿ ತೊಡಗಿರುವರು.

ಇತ್ತೀಚಿಗೆ ಡಾ.ಬಿ.ಎ.ವಿವೇಕ ರೈ ಸಂಪಾದಿಸಿರುವ 'ಪ್ರವಾಸಿ ಕಂಡ ವಿಜಯಗರ' ಕೃತಿಯಲ್ಲಿ ವಿದೇಶಿ ಪ್ರವಾಸಿಗ ಅಬ್ದುಲ್ ರಜಾಕ್ ಕಂಡ ವಿಜಯನಗರದ ವರ್ಣನೆ ಇದೆ. ಟಿ.ಪರಮೇಶ್ವರಪ್ಪ 'ಹಂಪೆ ಪರಂಪರೆ' ಎಂಬ ಕೃತಿಯನ್ನು (೧೯೯೬) ಸಂಪಾದಿಸಿದ್ದಾರೆ. ಇವು ಹಂಪಿ-ವಿಜಯನಗರ ಇತಿಹಾಸವನ್ನು ಕುರಿತಂತವು. ಹಂಪಿ ವಿಜಯನಗರ ಹೆರಿಟೇಜ್ ಟ್ರಸ್ಟ್‌ನವರು ಇದನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಹಂಪಿಯ ಚರಿತ್ರೆ, ಧರ್ಮ, ಕಲೆ, ಸ್ಮಾರಕಗಳ ರಕ್ಷಣೆ ಇತರ ವಿವರಗಳಿವೆ. ವಿಜಯನಗರ ಸಾಮ್ರಾಜ್ಯದಲ್ಲಿದ್ದ ವಿವಿಧ ಶಾಲೆ, ಧರ್ಮ ಮತ್ತು ಸಂಸ್ಕೃತಿಯನ್ನು ಪರಿಚಯಿಸಿದ್ದಾರೆ. ಕೃಷ್ಣದೇವರಾಯನ ಕಾಲದಲ್ಲಿ ಕ್ರೈಸ್ತ

ಮಿಷನರಿಗಳು ಎಂಬ ಲೇಖನದಲ್ಲಿ ಗುರುಮೂರ್ತಿ ಪೆಂಡಕೂರ ಅವರು ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಧರ್ಮಗಳ ಪ್ರಭಾವವನ್ನು ಗುರುತಿಸಿದ್ದಾರೆ.

ಇತ್ತೀಚಿನ ಅಧ್ಯಯನಗಳು ವಿಜಯಗರ ಕಾಲದ ಕಲೆ ಮತ್ತು ವಾಸ್ತುಶಿಲ್ಪ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತಿ-ಗತಿಗಳನ್ನು ಕುರಿತು ಹೆಚ್ಚಿನ ಅಧ್ಯಯನಗಳು ನಡೆಯುತ್ತಿವೆ. ಈ ಕಾಲದ ಮರೆಯಾದ ಯಾವುದೇ ಸಂಗತಿ ಕುರಿತು ಶೋಧಿಸಿ ಕಳಚಿದ ಕೊಂಡಿಯಂತೆ ಸರಿಪಡಿಸುವ ಕೆಲಸದಲ್ಲಿ ಸಂಶೋಧಕರು ನಿರತರಾಗಿರುವುದು ಶ್ಲಾಘನೀಯ.

ವಿಜಯನಗರ ಅವಧಿಯ ಶಾಸನ, ಹಸ್ತಪ್ರತಿ ಹಾಗೂ ಸಾಹಿತ್ಯದ ಬಗೆಗೂ ಸಾಕಷ್ಟು ಕೃಷಿ ನಡೆದಿದೆ. ಚನ್ನಬಸಪ್ಪ, ಎಸ್.ಪಾಟೀಲ್ ಅವರು, ಬಳ್ಳಾರಿ ಜಿಲ್ಲೆ ಮತ್ತು ಹಂಪಿ (ವಿಜಯನಗರ) ಶಾಸನಗಳನ್ನು ಸಂಗ್ರಹಿಸಿ ರಾಜ್ಯ ಪುರಾತತ್ತ್ವ ಇಲಾಖೆಯಿಂದ ಪ್ರಕಟಿಸಿದ್ದಾರೆ. ಅದೇ ರೀತಿ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗವು ಬಳ್ಳಾರಿ ಹಾಗೂ ಹಂಪಿ (ವಿಜಯನಗರ) ಶಾಸನಗಳನ್ನು ಪರಿಷ್ಕರಿಸಿ, ಹೊಸ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಡಾ.ಎಂ.ಎಂ.ಕಲಬುರ್ಗಿ ಅವರು ಕರ್ನಾಟಕದ ನಾಡುಗಳ ಬಗ್ಗೆ ಪ್ರಕಟಿಸಿರುವ ಕೃತಿಯಲ್ಲಿ ವಿಜಯನಗರ ಕಾಲದ ನಾಡುಗಳ ವಿವರಗಳಿವೆ. ಡಾ.ಎ.ವಿ.ನರಸಿಂಹಮೂರ್ತಿ ಅವರು ವಿಜಯನಗರ ಕಾಲದ ನಾಣ್ಯ ಸಂಪತ್ತಿನ ಬಗ್ಗೆ ಕೃತಿ ರಚಿಸಿದ್ದಾರೆ. ಸಿ.ಟಿ.ಎಂ.ಕೊಟ್ರಯ್ಯ ಅವರು ವಿಜಯನಗರ ಕಾಲದ ನೀರಾವರಿ ವ್ಯವಸ್ಥೆ, ಡಾ.ಎಸ್.ರಾಜಶೇಖರ ವಿಜಯನಗರ ಕಲೆ ಮತ್ತು ವಾಸ್ತುಶಿಲ್ಪ ಕುರಿತು, ಡಾ.ಪುರುಷೋತ್ತಮ ಬಿಳಿಮಲೆ ಮತ್ತು ಡಾ.ಚೆಲುವರಾಜು ಅವರುಗಳು ಹಂಪಿ ಜಾನಪದ, ಡಾ.ಚೆಲುವರಾಜುರವರು ಹಂಪಿ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು ಎಂಬ ಕೃತಿ ಪ್ರಕಟಿಸಿದ್ದಾರೆ. ಈ ಕಾಲಘಟ್ಟದ ಶಿಲ್ಪ, ಶಾಸನ, ಚಿತ್ರಕಲೆ, ವೀರಗಲ್ಲು ಮತ್ತು ಮಾಸ್ತಿಕಲ್ಲುಗಳ ಬಗ್ಗೆ ಅಧ್ಯಯನಗಳು ನಡೆದಿವೆ. ಡಾ.ಚಿನ್ನಸ್ವಾಮಿ ಸೋಸಲೆಯವರು ಸಾಮ್ರಾಜ್ಯ ಮತ್ತು ಸಂಸ್ಥಾನ ಎಂಬ ಕೃತಿಯಲ್ಲಿ ವಿಜಯನಗರ ಸಾಮ್ರಾಜ್ಯದ ಚರಿತ್ರೆ ಮತ್ತು ಸಂಸ್ಕೃತಿ ಕುರಿತ ಸಂಗತಿಗಳನ್ನು ಚರ್ಚಿಸಿದ್ದಾರೆ. ಹಂಪಿಯ ಸುತ್ತಮುತ್ತ ಸರ್ವೇಕ್ಷಣೆ ಮತ್ತು ಉತ್ಖನನ ಕಾರ್ಯ ನಡೆಯುತ್ತಿದ್ದು, ಹೊಸ ಹೊಸ ಅವಶೇಷಗಳು ಪತ್ತೆಯಾಗಿವೆ. ಹಂಪಿ-ವಿಜಯನಗರ ಕುರಿತ ಇತ್ತೀಚಿನ ಸಂಶೋಧನೆಗಳು ಸಾಂಸ್ಕೃತಿಕ ಚರಿತ್ರೆಯನ್ನು ಒಳಗೊಂಡಿವೆ. ಅಂತರ್‌ಶಿಸ್ತುಗಳ ಮೂಲಕವು ವಿಜಯನಗರದ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಅನೇಕ ವಿದ್ವಾಂಸರು ಶ್ರಮಿಸಿರುವುದು ಗಮನಾರ್ಹ.

ಒಟ್ಟಿನಲ್ಲಿ ವಿಜಯನಗರವನ್ನು ಕುರಿತು ಇತ್ತೀಚೆಗೆ ನಡೆದ ಅನೇಕ ಸಂಶೋಧನೆಗಳು ಪ್ರಮುಖವಾಗಿ ವಿಜಯನಗರ ಕಾಲದ ಹಂಪಿ ಪರಿಸರದ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪವನ್ನು ಕುರಿತು ಪ್ರತ್ಯೇಕವಾದ ಸಂಶೋಧನೆಗಳು ನಡೆದಿಲ್ಲ. ಈ ನಿಟ್ಟಿನಲ್ಲಿ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪವನ್ನು ಕುರಿತಂತೆ ಅಧ್ಯಯನವನ್ನು ಕೈಗೆತ್ತಿಕೊಂಡಿರುವುದು ಇಲ್ಲಿನ ಪ್ರಮುಖ ಉದ್ದೇಶವಾಗಿದೆ.

ವಿಜಯನಗರ ಕಾಲದ ಇಸ್ಲಾಮಿಕ್ ಶೈಲಿಯ ವಾಸ್ತುಶಿಲ್ಪವನ್ನು ಈವರೆಗೆ ಸಮಗ್ರವಾಗಿ ಅಧ್ಯಯನ ಮಾಡದೇ ನಿರ್ಲಕ್ಷಿಸಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಇಂದಿಗೂ ಹಂಪಿ ಮತ್ತು ಇತರೆಡೆಗಳಲ್ಲಿ ಇಸ್ಲಾಮಿಕ್ ವಾಸ್ತುಶಿಲ್ಪ ಸ್ಮಾರಕಗಳಿದ್ದು, ಇಲ್ಲಿನ ಜನರ ನಡುವೆ ಸಂಬಂಧ ಸೌಹಾರ್ದಯುತವಾಗಿತ್ತು, ಎಂಬುದಕ್ಕೆ ಆಧಾರಗಳಿವೆ. ವಿಜಯನಗರ ಸಾಮ್ರಾಜ್ಯದ ರಾಜಧಾನಿಯಲ್ಲಿ ಮತ್ತು ಅದರ ಆಸುಪಾಸಿನಲ್ಲಿ ಅನೇಕ ಸ್ಮಾರಕಗಳಿವೆ. ಅವುಗಳಲ್ಲಿ ಮಸೀದಿ, ಗುಮ್ಮಟ, ಧಾರ್ಮಿಕ ಕಟ್ಟಡಗಳು, ನಾಗರಿಕ ಅಥವಾ ಸಾರ್ವಜನಿಕ ಕಟ್ಟಡಗಳು ಕಂಡುಬರುತ್ತವೆ. ಇವು ಗುಲ್ಬರ್ಗಾ ಮತ್ತು ಬಿಜಾಪುರ ಗುಮ್ಮಟಗಳಲ್ಲಿ ಕಂಡುಬರುವ ತಾಂತ್ರಿಕ ಮತ್ತು ರಚನಾತ್ಮಕ ಲಕ್ಷಣಗಳ ಹೋಲಿಕೆಗಳನ್ನು ಹೊಂದಿವೆ. ಇಲ್ಲಿ ತಿಳಿಯುವ ಅಂಶವೆಂದರೆ, ಎಲ್ಲ ಸಮುದಾಯಗಳಂತೆ ರಾಜಧಾನಿಯಲ್ಲಿ ಮುಸ್ಲಿಮರು ಸಹ ತಮ್ಮನ್ನು ಈ ಕೆಲದಲ್ಲಿ ತೊಡಗಿಸಿಕೊಂಡಿದ್ದರು. ಹಾಗಾಗಿ ಪ್ರಸ್ತುತ ಅಧ್ಯಯನವು ವಿಜಯನಗರ ಕಾಲದಲ್ಲಿ ಇಸ್ಲಾಮಿಕ್ ವಾಸ್ತುಶಿಲ್ಪವನ್ನು ಕುರಿತು ವಿಶೇಷವಾಗಿ ಸ್ಮಾರಕಗಳನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

ವಿಜಯನಗರದ ರಾಜಧಾನಿ ಕೇಂದ್ರವಾಗಿದ್ದ ಹಂಪಿಯ ಉತ್ತರಕ್ಕೆ ಸರಿಸುಮಾರು ೧.೫ ಕಿ.ಮೀ. ದೂರದಲ್ಲಿ ನಾಲ್ಕು ಬೇರೆ ಬೇರೆ ಸ್ಥಳಗಳಲ್ಲಿ ಹಲವಾರು ಗೋರಿ, ಮಸೀದಿ, ಸ್ಮಶಾನ ಸ್ಥಳ ಮತ್ತು ಗುಮ್ಮಟಗಳು ಕಂಡುಬಂದಿವೆ.

೧. ಕೋಟೆಯ ಆವರಣದಿಂದ ಒಳಗಡೆಯ ನಗರ ಪ್ರದೇಶದಲ್ಲಿರುವ ಸ್ಮಾರಕಗಳು.

೨. ಕಡ್ಡಿರಾಮಪುರದ ಗ್ರಾಮದ ಹೊರಗಡೆ ಹಂಪಿಯ ಕೇಂದ್ರದಿಂದ ಸುಮಾರು ೨ ಕಿ.ಮೀ. ದೂರದಲ್ಲಿ ಪಶ್ಚಿಮ ದಿಕ್ಕಿನಲ್ಲಿರುವ ಸ್ಮಾರಕಗಳು.

೩. ರಾಜಧಾನಿ ಕೇಂದ್ರವಾದ ಹಂಪಿಯಲ್ಲಿ ಕಂಡುಬರುವ ಸ್ಮಾರಕಗಳು.

೪. ಹೊಸಪೇಟೆ ನಗರದ ವಾಯವ್ಯಕ್ಕೆ ಸುಮಾರು ೧೦ ಕಿ.ಮೀ. ದೂರದಲ್ಲಿ (ವಿಜಯನಗರ ವ್ಯಾಪ್ತಿಯಲ್ಲಿ) ಕಂಡುಬರುವ ಸ್ಮಾರಕಗಳು.

ವಿಜಯನಗರ ಕಾಲದಲ್ಲಿ ಮಹಮದೀಯರನ್ನು ಕುರಿತಂತೆ ಒಂದು ಶಾಸನ ಬೆಳಕು ಚೆಲ್ಲುತ್ತದೆ. ಮಹಾನವಮಿ ದಿಬ್ಬದ ಈಶಾನ್ಯಕ್ಕೆ ಇರುವ ಮಸೀದಿಯ ಬಳಿ ಇದು ದೊರತಿದೆ. ಈ ಶಿಲಾಶಾಸನದಲ್ಲಿ ಕಟ್ಟಡ ನಿರ್ಮಾಣಕ್ಕೆ ಪ್ರೋತ್ಸಾಹಿಸಿದವರ ಹೆಸರು ಅಹಮದ್ ಖಾನ್ ಎಂಬ ಸಂತನ ಬಗ್ಗೆ ಮತ್ತು ನಿರ್ಮಾಣ ವರ್ಷ ೧೪೩೯ ಎಂದು ಉಲ್ಲೇಖಿಸಲಾಗಿದೆ. ಆಗ ವಿಜಯನಗರವನ್ನು ಆಳುತ್ತಿದ್ದ ದೊರೆ ಎರಡನೆಯ ದೇವರಾಯ ಎಂಬುದು ತಿಳಿದುಬರುತ್ತದೆ.

ವಿಜಯನಗರ ಕಾಲದ ಕಟ್ಟಡಗಳಲ್ಲಿ (ಇಸ್ಲಾಮಿಕ್ ಶೈಲಿಯಲ್ಲಿ) ನಿರ್ಮಾಣಕ್ಕೆ ದಾನ ನೀಡಿದವರಲ್ಲಿ 'ಅಹಮದ್ ಖಾನ್' ಎಂಬ ಹೆಸರು ಕಂಡುಬರುವುದು ಮಾತ್ರ ಒಂದೇ. ಕೆಲವು ಕಡೆ ಇಸ್ಲಾಂ ಶೈಲಿಯ

ಸ್ಮಾರಕಗಳು ಗುಂಪು ಗುಂಪಾಗಿ ಕಂಡುಬಂದಿವೆ. ಬಹುಶಃ ಅಲ್ಲಿ ಮುಸ್ಲಿಂ ಜನರು ಹೆಚ್ಚಾಗಿ ವಾಸಿಸಿದ್ದಿರಬಹುದು.

ವಿಜಯನಗರದಲ್ಲಿ ಕಾಣಸಿಗುವ ಗುಮ್ಮಟಗಳು ಬಹುಮನಿ ಶೈಲಿಯನ್ನು ಹೋಲುವುದಷ್ಟೇ ಅಲ್ಲ. ಹೆಚ್ಚು ಕಡಿಮೆ ಅದೇ ಸಮಯದಲ್ಲಿ ನಿರ್ಮಾಣಗೊಂಡಿವೆ. ಆದ್ದರಿಂದ ಈ ಸ್ಮಾರಕಗಳ ನಿರ್ಮಾಪಕನೆಂದು ಊಹಿಸಬಹುದಾದ ಅಹಮದ್‌ಖಾನ್ ಹೆಸರನ್ನು ಉಲ್ಲೇಖಿಸಲಾಗಿದೆ. ಇಂಗ್ಲೆಂಡಿನ ಪ್ರಸಿದ್ಧ ವಿದ್ವಾಂಸರಾದ ಜಾರ್ಜ್ ಮಿಶೆಲ್‌ರವರು ವಿಜಯನಗರದಲ್ಲಿ ಇಸ್ಲಾಮಿಕ್ ವಾಸ್ತುಶಿಲ್ಪ ಸ್ಮಾರಕಗಳನ್ನು ಪ್ರತ್ಯೇಕವಾಗಿ, ಪರೋಕ್ಷವಾಗಿ ಬೆಳಕು ಚೆಲ್ಲುವ ಕೆಲಸ ಮಾಡಿದ್ದಾರೆ. ಈ ಸಾಮ್ರಾಜ್ಯದಲ್ಲಿನ ವಾಸ್ತುಶಿಲ್ಪದ ಪ್ರಮುಖ್ಯತೆಯನ್ನು ಕುರಿತು ಈವರೆಗೆ ಇಂಥ ಅಧ್ಯಯನಗಳು ಬೆಳಕು ಚೆಲ್ಲಿಲ್ಲ. ಹಾಗಾಗಿ ಈ ಅಧ್ಯಯನ ಕೈಗೊಂಡು ಹೊಸ ಸಂಗತಿಗಳನ್ನು ಬೆಳಕಿಗೆ ತರುವ ಪ್ರಯತ್ನವಿದೆ.

ವಿಜಯನಗರದ ಸಂಗಮ, ಸಾಳುವ, ತುಳುವ ಮತ್ತು ಅರವೀಡು ವಂಶಗಳ ದೊರೆಗಳು ಬಹಮನಿ ಶೈಲಿಯನ್ನು ಅನುಸರಿಸಿ ಸ್ಮಾರಕಗಳನ್ನು ನಿರ್ಮಿಸಿದ್ದಾರೆ. ಈ ಬಗೆಯ ಸ್ಮಾರಕಗಳು ವಿಜಯನಗರ ಸಾಮ್ರಾಜ್ಯದದ್ಯಾಂತ ಕಂಡುಬಂದಿವೆ. ವಿಜಯನಗರ ನಂತರ ಈ ಸ್ಮಾರಕಗಳು ಭಗ್ನಗೊಂಡು, ಶಿಥಿಲಗೊಂಡಾಗ ರಕ್ಷಣೆ ಕಾರ್ಯಗಳನ್ನು ಕಲೆಕ್ಟರ್‌ಗಳ (ಬಳ್ಳಾರಿ) ಆಳ್ವಿಕೆಯಲ್ಲಿ ಮಾಡಲಾಯಿತು (ಸ್ಮಾರಕಗಳೆಂದರೆ ಜ್ಞಾಪಕಾರ್ಥವಾಗಿ ಕಟ್ಟಿಸಿರುವ ವಸ್ತು, ಪ್ರತಿಮೆ, ದೇವಾಲಯ, ಕಟ್ಟೆ, ಕೋಟೆ ಮುಂತಾದವುಗಳನ್ನು ಹೆಸರಿಸುತ್ತೇವೆ). ಬಳ್ಳಾರಿ ಜಿಲ್ಲೆಯ ಕಲೆಕ್ಟರರಾದ ರಾಬರ್ಟ್ ಸಿವೆಲ್‌ನು ಇಲ್ಲಿನ ಸ್ಮಾರಕಗಳ ರಕ್ಷಣಾ ಕಾರ್ಯವನ್ನು ಕೈಗೊಂಡನು. ರಾಬರ್ಟ್ ಸಿವೆಲ್ ರಚಿಸಿದ ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ ಕೃತಿಯಲ್ಲಿ ಈ ಕುರಿತು ಪ್ರಸ್ತಾಪಿಸಲಾಗಿದೆ.

ವಿಜಯನಗರ ಕಾಲದಲ್ಲಿ ಇಸ್ಲಾಮಿಕ್ ವಾಸ್ತುಶಿಲ್ಪವು ಹಿಂದೂ-ಮುಸ್ಲಿಂ ಸಂಸ್ಕೃತಿಯ ಸಮ್ಮಿಲನದ ಸಂಕೇತವಾಗಿದೆ. ಇಂಡೋ-ಇಸ್ಲಾಮಿಕ್ ಒಂದು ಹೊಸ ಶೈಲಿಯನ್ನು ಅಳವಡಿಸಿಕೊಂಡು ವಿಜಯನಗರ ಸಾಮ್ರಾಜ್ಯದಲ್ಲಿ ಅನೇಕ ಇಸ್ಲಾಮಿಕ್ ವಾಸ್ತುಶೈಲಿಯ ಕಟ್ಟಡಗಳು ನಿರ್ಮಾಣವಾದ ಸಂಗತಿಯನ್ನು ಬೆಳಕಿಗೆ ತರಬೇಕಾಗಿದೆ. ಧಾರ್ಮಿಕ, ಆರ್ಥಿಕ, ರಾಜಕೀಯ, ಸಾಮಾಜಿಕ ಕ್ಷೇತ್ರದಲ್ಲಿ ಹಿಂದೂ-ಮುಸ್ಲಿಮರ ಜನಜೀವನ ಹೇಗೆ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪವನ್ನು ಬೆಳೆಸುವಲ್ಲಿ ಸಹಕಾರಿಯಾಗಿದೆ ಎಂಬುದನ್ನು ಚರ್ಚಿಸುವ ಅಗತ್ಯವಿದೆ. ಅಂದಿನ ಜನಜೀವನದ ವಿವರಗಳನ್ನು ಈ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶವಿದೆ. ಹಿಂದೂ ಮತ್ತು ಮುಸ್ಲಿಂ ಸಂಸ್ಕೃತಿಯ ಸಮ್ಮಿಲನದ ಪ್ರತೀಕವಾಗಿರುವ ಸ್ಮಾರಕಗಳನ್ನು ಇಲ್ಲಿ ವಿಶೇಷವಾಗಿ ವಿಶ್ಲೇಷಿಸಲಾಗುವುದು. ವಿಜಯನಗರದ ಅರಸರು ಇಸ್ಲಾಮಿಕ್ ಕಲೆಗೆ ಕೊಟ್ಟ ಪ್ರೋತ್ಸಾಹ ಅಮೂಲ್ಯವಾಗಿದ್ದುದು ಸ್ಪಷ್ಟ. ಈ ಮೂಲಕ ಮರೆಯಾದ ಸಂಗತಿಗಳನ್ನು ಮತ್ತು ವಿಜಯನಗರ ಕಾಲದಲ್ಲಿ ಇಸ್ಲಾಮಿಕ್ ವಾಸ್ತುಶಿಲ್ಪಕಲೆಯ ಅಧ್ಯಾಯವೊಂದನ್ನು ಕಟ್ಟಿಕೊಡುವುದಾಗಿದೆ. ಹೀಗೆ ಈ ಸಾಮ್ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪ ಹೇಗೆ ಪರಿಣಾಮಕಾರಿ ಆಯಿತು ಎಂಬುದನ್ನು ಇಲ್ಲಿ ಪರಿಗಣಿಸುವುದು ಔಚಿತ್ಯವಾಗಿದೆ.

ಒಟ್ಟಾರೆಯಾಗಿ ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ಶೈಲಿಯ ಸ್ಮಾರಕಗಳನ್ನು ಮುಖ್ಯವಾಗಿ ಗುರುತಿಸುವುದರ ಜೊತೆಗೆ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಪ್ರಸ್ತುತ ಪ್ರಬಂಧವು ಏಳು ಅಧ್ಯಯನಗಳಿಂದ ಕೂಡಿದೆ. ಪ್ರತಿಯೊಂದು ಅಧ್ಯಯನದ ವಿವರ ಇಂತಿದೆ.

**ಮೊದಲನೆಯ ಅಧ್ಯಾಯದಲ್ಲಿ** ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನವನ್ನು ತಿಳಿಸಲಾಗಿದೆ. ವಿಜಯನಗರ ಕಾಲದಲ್ಲಿ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪವು ಪ್ರಖ್ಯಾತಿ ಪಡೆದಿದ್ದು ನಿಜ. ವಿಜಯನಗರ ಕಾಲದ ಬಗ್ಗೆ ಹೆಚ್ಚಾಗಿ ಪ್ರಭುತ್ವ ಕೇಂದ್ರಿಕೃತ ಅಧ್ಯಯನಗಳಾಗಿರುವುದೇ ಹೆಚ್ಚು. ಹಲವಾರು ವಿಷಯಗಳನ್ನು ಕುರಿತು ಅಧ್ಯಯನಗಳಾಗಿದ್ದರೂ, ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪವನ್ನು ಕುರಿತು ದಿವ್ಯ ನಿರ್ಲಕ್ಷ್ಯವಹಿಸಿರುವುದು ಸ್ಪಷ್ಟ ಸಂಗತಿ. ಹಾಗಾಗಿ ಇಲ್ಲಿ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪವನ್ನು ಕುರಿತಾದ ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವಿಧಾನವನ್ನು ಸ್ಪಷ್ಟವಾಗಿ ವಿಶ್ಲೇಷಿಸಲಾಗಿದೆ.

ವಿಜಯನಗರದ ಕಾಲದ ಸಂಕ್ಷಿಪ್ತ ಇತಿಹಾಸವನ್ನು ಕುರಿತು **ಎರಡನೆಯ ಅಧ್ಯಾಯದಲ್ಲಿ** ತಿಳಿಸುತ್ತಾ ವಿಜಯನಗರ ಕಾಲದಲ್ಲಿ ಮಹಮದೀಯರ ಪಾತ್ರ, ವಿಜಯನಗರ ಕಾಲದಲ್ಲಿ ಹಿಂದೂ-ಮುಸ್ಲಿಮರ ಸೌಹಾರ್ದತೆ ಕುರಿತು ಸೂಕ್ಷ್ಮವಾದ ಪರಿಚಯವನ್ನು ತಿಳಿಸುವ ಉದ್ದೇಶವಿದೆ.

**ಮೂರನೆಯ ಅಧ್ಯಾಯದಲ್ಲಿ** ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪ ಶೈಲಿಯ ಉಗಮ ಮತ್ತು ವಿಕಾಸ, ದಕ್ಷಿಣ ಭಾರತ, ವಿಜಯನಗರ, ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಲಕ್ಷಣಗಳು ವಿಶ್ಲೇಷಿಸುವ ಪ್ರಯತ್ನ ಅಧ್ಯಾಯದಲ್ಲಿ ಮಾಡಲಾಗಿದೆ.

**ನಾಲ್ಕನೆಯ ಅಧ್ಯಾಯದಲ್ಲಿ** ಹಂಪಿ ಪರಿಸರದ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪ ಸ್ಮಾರಕಗಳನ್ನು ಕುರಿತಂತೆ ಹಂಪಿ, ಕಡ್ಡಿರಾಮಪುರ, ಕಮಲಾಪುರ, ಮಲಪನಗುಡಿ, ಹೊಸಪೇಟೆ, ಆನೆಗೊಂದಿ ಸ್ಮಾರಕಗಳನ್ನು ವಿಶ್ಲೇಷಿಸಲಾಗಿದೆ.

**ಐದನೆಯ ಅಧ್ಯಾಯದಲ್ಲಿ** ಹಂಪಿಯೇತರ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ಸ್ಮಾರಕಗಳನ್ನು ಕನಕಗಿರಿ, ಪೆನುಗೊಂಡ ಮತ್ತು ಚಂದ್ರಗಿರಿ, ಪ್ರದೇಶದಲ್ಲಿ ಗುರುತಿಸಲಾಗಿದೆ.

**ಆರನೆಯ ಅಧ್ಯಾಯದಲ್ಲಿ** ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪ ಹಾಗೂ ಆ ಕಾಲದ ಜನಜೀವನ ಕುರಿತಂತೆ ವಿವರಿಸುವ ಪ್ರಯತ್ನವಿದೆ. ಅಂದರೆ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪ ಮತ್ತು ಸಾಮಾಜಿಕ ಜೀವನ ಶೈಲಿಯ ವಿವರಣೆಯನ್ನು ಈ ಅಧ್ಯಯನ ಒಳಗೊಂಡಿದೆ.

**ಏಳನೆಯ ಅಧ್ಯಾಯವು** ಸಮಾರೋಪವಾಗಿದ್ದು. ಆರು ಅಧ್ಯಯನಗಳಿಂದ ಹೊರಹೊಮ್ಮಿದ ಫಲಿತಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಅನುಬಂಧದಲ್ಲಿ ಗ್ರಂಥಸೂಚಿ, ಛಾಯಾಚಿತ್ರಗಳು, ನಕ್ಷೆಗಳನ್ನು ಕೊಡಲಾಗುವುದು.

ಒಟ್ಟಾರೆಯಾಗಿ, ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಅಧ್ಯಾಯವೊಂದು ಚರಿತ್ರೆಯ ಪುಟಗಳಲ್ಲಿ ಮರೆಯಾಗಿದ್ದು, ಅದನ್ನು ಕಟ್ಟಿಕೊಡುವ ಪ್ರಯತ್ನ ಇದಾಗಿದೆ.

**ಅಧ್ಯಯನದ ವಿಧಾನ :**

ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪ ಸ್ಮಾರಗಳನ್ನು ಕುರಿತ ಈ ಅಧ್ಯಯನಕ್ಕೆ ಸಮಾಜ ವಿಜ್ಞಾನದ ಕ್ಷೇತ್ರದ ಸಂಶೋಧನಾ ವಿಧಿ-ವಿಧಾನಗಳನ್ನು ಅನುಸರಿಸಲಾಗುತ್ತದೆ. ಮುಖ್ಯವಾಗಿ ಚರಿತ್ರೆಶಿಸ್ತನ್ನು ಅಳವಡಿಸಿಕೊಳ್ಳಲಾಗುವುದು. ಈ ಮೂಲಕ ಪ್ರಕಟಿತ ಗ್ರಂಥಗಳು, ಸಮಕಾಲೀನ ಕೃತಿಗಳು, ಶಿಲಾಶಾಸನಗಳು, ದೇವಾಲಯ, ನಾಣ್ಯ, ವೀರಗಲ್ಲು, ಮಾಸ್ತಿಗಲ್ಲು, ಚಿತ್ರಕಲೆ ಇತರ ಆಕರಗಳಿಂದ ವಾಸ್ತುಶಿಲ್ಪ ಹಾಗೂ ಸ್ಮಾರಕಗಳನ್ನು ವಿಶ್ಲೇಷಿಸಲಾಗುವುದು.

ಎಚ್.ಎಲ್.ನಾಗೇಗೌಡ, ಡಾ.ಕೆ.ಎಸ್.ಶಿವಣ್ಣ ಪ್ರೊ.ಬಿ.ಷೇಕ್‌ಅಲಿ, ಬಿ.ಸೂರ್ಯನಾರಾಯಣರಾವ್, ಡಾ.ಬಿ.ಎ.ವಿವೇಕ ರೈ, ಡಾ.ಬಸವರಾಜ ಮಲಶೆಟ್ಟಿ, ಜೊತೆಗೆ ವಿದೇಶಿ ಪ್ರವಾಸಿಗರಾದ ಅಬ್ದುಲ್ ರಜಾಕ್, ನಿಕೋಲೋ ಕೊಂಟಿ, ಡೊಮಿಂಗೋ ಪಾಯಸ್, ಬಾರ್ಬೋಸಾ, ನ್ಯೂನಿಜ್, ರಾಬರ್ಟ್ ಸಿವೆಲ್ ಮೊದಲಾದವರ ಬರವಣಿಗೆಗಳನ್ನು ಇಲ್ಲಿ ಗಮನಿಸಲಾಗುವುದು. ಅಲ್ಲದೇ ಸಮಕಾಲೀನ ಸಂದರ್ಭದಲ್ಲಿ ಜಾರ್ಜ್ ಮಿಶೆಲ್‌ರವರ ವಿಜಯನಗರದಲ್ಲಿ ಇಸ್ಲಾಮಿಕ್ ವಾಸ್ತುಶಿಲ್ಪ ಮೊದಲಾದ ಕೃತಿಗಳ ಜೊತೆಗೆ ಮೌಖಿಕ, ಶಿಲ್ಪ, ಕಥನ, ಪ್ರಕಟಿತ, ಅಪ್ರಕಟಿತ ಆಕರಗಳಲ್ಲದೇ ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿಯನ್ನು ಇಲ್ಲಿ ವಿಶ್ಲೇಷಿಸಲಾಗುತ್ತದೆ. ಅಧ್ಯಾಯಗಳಿಗೆ ಪೂರಕವಾದ ಅನುಬಂಧವಿದೆ. ಇಲ್ಲಿ ಛಾಯಾಚಿತ್ರ, ಗ್ರಂಥಋಣ, ನಕ್ಷೆ ಇತರೆ ಪೂರಕ ಮಾಹಿತಿಯನ್ನು ನೀಡಲಾಗುವುದು. ಅಧ್ಯಯನಕ್ಕೆ ತಕ್ಕಂತೆ ಟಿಪ್ಪಣಿಗಳನ್ನು ಕೊಡಲಾಗಿದೆ.

ಕಾಲ, ಘಟನೆ, ವಸ್ತು, ವಿಷಯ ಹೀಗೆ ವಿಜಯನಗರದ ಇಸ್ಲಾಮಿಕ್ ವಾಸ್ತುಶಿಲ್ಪ ಶೈಲಿಯ ಸ್ಮಾರಕಗಳನ್ನು, ಚಾರಿತ್ರಿಕ ಸಂದರ್ಭಗಳನ್ನು ಕಾಲಾನುಕ್ರಮವಾಗಿ, ಸೂಕ್ಷ್ಮವಾಗಿ ಅಧ್ಯಯನ ಮಾಡಲಾಗುತ್ತದೆ. ಅನುಕೂಲಕ್ಕಾಗಿ ಏಳು ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ. ವಿಜಯನಗರ ಇತಿಹಾಸ, ಮಹಮದೀಯರ ಪಾತ್ರ, ಹಿಂದೂ ಮುಸ್ಲಿಮರ ಸೌಹಾರ್ದತೆ ಹೀಗೆ ಇಸ್ಲಾಮಿಕ್ ಶೈಲಿಯ ವಾಸ್ತುಶಿಲ್ಪವನ್ನು ಪ್ರಸ್ತುತ ಪ್ರಬಂಧದಲ್ಲಿ ಅಧ್ಯಯನ ಮಾಡಲಾಗುವುದು.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪ ಶೈಲಿಯ ಸ್ಮಾರಕಗಳನ್ನು ಕುರಿತದ್ದಾಗಿದೆ. ಈ ಕುರಿತಂತೆ ಈವರೆಗೆ ಯಾವುದೇ ಬಗೆಯ ಸಂಶೋಧನೆಗಳು ನಡೆದಿರುವುದು ತುಂಬಾ ವಿರಳ. ಕೆಲವು ಲೇಖನ ಗ್ರಂಥಗಳು ಹೊರಬಂದಿವೆ. ಅವು ಪರೋಕ್ಷವಾಗಿ ಈ ಮೇಲಿನ ವಿಷಯವನ್ನು ಪರಿಚಯಿಸುತ್ತವೆ ಹೊರತು ಸಮಗ್ರವಾದ ಅಧ್ಯಯನಗಳು ನಡೆದಿಲ್ಲ.

ಪ್ರಸ್ತುತ ಅಧ್ಯಯನವು ಕ್ರಿ.ಶ. ೧೩೩೬ ರಿಂದ ೧೫೬೫ರ ವರೆಗಿನ ಕಾಲಮಾನವನ್ನು ಒಳಗೊಂಡಿದೆ. ಹಾಗೆಯೇ ಈ ಅವಧಿಯಲ್ಲಿ ಆಳ್ವಿಕೆ ನಡೆಸಿದ ಸಂಗಮ, ಸಾಳುವ, ತುಳುವ ಮತ್ತು ಅರವೀಡು ವಂಶಗಳ ಅರಸರು ನಿರ್ಮಿಸಿದ ಸ್ಮಾರಕಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗಿದೆ. ಇಲ್ಲಿ ಹಂಪಿ ಪರಿಸರ ಎಂದೂ ಇಟ್ಟುಕೊಂಡಿದ್ದರೂ ಸಮಗ್ರ ವಿಷಯದ ಸಂಗ್ರಹ ಮತ್ತು ವಿಶ್ಲೇಷಣೆಗಾಗಿ ಹಂಪಿಯೇತರ ಸ್ಮಾರಕಗಳನ್ನು ಇಲ್ಲಿ ತಿಳಿಸಲಾಗುವುದು. ಹಂಪಿ ಪರಿಸರದಲ್ಲಿ ಆನೆಗೊಂದಿ ಈಗಿನ ಹಂಪಿ ಗ್ರಾಮ, ಕಮಲಮಹಲ್, ತಳವಾರಘಟ್ಟ, ಹೆಬ್ಬಾಗಿಲು, ರಾಣಿಯರ ಸ್ನಾನಗೃಹ, ಕಾವಲುಗೋಪುರ, ಗಜಶಾಲೆ, ಅಹಮದ್‌ಖಾನ್ ಧರ್ಮಶಾಲೆ, ಮಸೀದಿ, ಗೋರಿ, ಸ್ಮಶಾನಗಳಲ್ಲದೆ ಕಡ್ಡಿರಾಮಪುರ, ಮಲಪನಗುಡಿ, ಅನಂತಶಯನಗುಡಿ, ಕಮಲಾಪುರ, ಹೊಸಪೇಟೆ ಪರಿಸರದಲ್ಲಿರುವ ಸ್ಮಾರಕಗಳನ್ನು ಅವಲೋಕಿಸಲಾಗವುದು. ಇದರ ಜೊತೆಗೆ ಪೆನುಗೊಂಡ, ಚಂದ್ರಗಿರಿ ಮೊದಲಾದ ಸ್ಥಳಗಳಲ್ಲಿರುವ ಸ್ಮಾರಕಗಳನ್ನು ಇಲ್ಲಿ ಪರಿಚಯಿಸಲಾಗುವುದು.

# ಅಧ್ಯಾಯ ಎರಡು

## ವಿಜಯನಗರ ಕಾಲದ ಸಂಕ್ಷಿಪ್ತ ಇತಿಹಾಸ

೨.೧. ವಿಜಯನಗರ ಸಾಮ್ರಾಜ್ಯದ ಸಂಕ್ಷಿಪ್ತ ಇತಿಹಾಸ

೨.೨. ವಿಜಯನಗರ ಕಾಲದಲ್ಲಿ ಮಹಮದೀಯರ ಪಾತ್ರ

೨.೩. ವಿಜಯನಗರ ಕಾಲದಲ್ಲಿ ಹಿಂದೂ ಮುಸ್ಲಿಮರ ಸೌಹಾರ್ದತೆ

## ಅಧ್ಯಾಯ ಎರಡು

### ೨. ವಿಜಯನಗರ ಕಾಲದ ಸಂಕ್ಷಿಪ್ತ ಇತಿಹಾಸ

ವಿಜಯನಗರ ಸಾಮ್ರಾಜ್ಯವು ಭಾರತದ ಇತಿಹಾಸದಲ್ಲಿಯೇ ರಾಜ್ಯಾಳ್ವಿಕೆಯ ಕಾರಣಗಳಿಂದಾಗಿ ಚಾರಿತ್ರಿಕ ಮಹತ್ವ ಪಡೆದಿದೆ. ಈ ಸಾಮ್ರಾಜ್ಯದಲ್ಲಿ ಸಂಗಮ, ಸಾಳ್ವ, ತುಳುವ ಮತ್ತು ಅರವೀಡು ಎಂಬ ಒಟ್ಟು ನಾಲ್ಕು ಮನೆತನಗಳು ಕ್ರಿ.ಶ. ೧೩೩೬ ರಿಂದ ೧೫೬೫ರ ವರೆಗೆ ಆಳ್ವಿಕೆ ನಡೆಸಿರುತ್ತವೆ. ಈ ಸಾಮ್ರಾಜ್ಯವು ಹಂಪಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸಿತು.[೧] ವಿಜಯನಗರಕ್ಕೆ ನಾನಾ ಹೆಸರುಗಳಿಂದಲೂ ಕರೆಯುತ್ತಾರೆ. ಮುಖ್ಯವಾಗಿ ವಿರೂಪಾಕ್ಷ ಪಾದ, ವಿರೂಪಾಕ್ಷ ಪಟ್ಟಣ, ಹೊಸಪಟ್ಟಣ, ವಿದ್ಯಾನಗರ, ವಿರೂಪಾಕ್ಷಪುರ ಎಂದು, ಕಾವ್ಯದಲ್ಲಿ ಪಂಪಾತೀರ್ಥ, ಭಾಸ್ಕರ ಕ್ಷೇತ್ರ, ಪಂಪಾವರ ಕ್ಷೇತ್ರ, ಭುವನತ್ರೆಯ್ಯ ಸಹಿತ ಮೊದಲಾದ ಹೆಸರುಗಳಿಂದ ಹಂಪಿ ತನ್ನ ಚರಿತ್ರೆಯನ್ನು ಇತಿಹಾಸದಲ್ಲಿ ಸ್ಥಿರಗೊಳಿಸಿಕೊಂಡಿದೆ.[೨]

ಹಂಪಿಯಲ್ಲಿ ಪ್ರಾಗೈತಿಹಾಸಿಕ ಕುರುಹುಗಳು ಕಂಡುಬರುತ್ತವೆ. ಈ ಪ್ರದೇಶವು ಪ್ರಾಚೀನ ಕಾಲದಿಂದಲೂ ಐತಿಹಾಸಿಕ ಮಹತ್ವ ಪಡೆದಿದೆ. ಮುಖ್ಯವಾಗಿ ಧಾರ್ಮಿಕ ಸಾಮರಸ್ಯವನ್ನು ಸಮನ್ವಯತೆಯನ್ನು ಎತ್ತಿಹಿಡಿಯುವ ಪ್ರೇಕ್ಷಣೀಯ ಸ್ಥಳವಾಗಿ ಪರಿವರ್ತನೆಗೊಂಡಿರುವುದನ್ನು ಕಾಣಬಹುದು. ಮೌರ್ಯರ ಕಾಲದಿಂದ ಆಧುನಿಕ ಮೈಸೂರಿನ ಒಡೆಯರು, ನಾಯಕರು, ಪಾಳೆಯಗಾರರು ಈ ಪ್ರದೇಶದಲ್ಲಿ ಆಳ್ವಿಕೆಯನ್ನು ನಡೆಸಿದ್ದಾರೆ. ಆದರೆ ವಿಜಯನಗರ ಕಾಲವು ಹೊಸ ಪರಿವರ್ತನೆಗೆ ನಾಂದಿ ಹಾಡಿದ್ದರಿಂದ, ಹಂಪಿ ವಿಶ್ವವ್ಯಾಪಿ ಖ್ಯಾತಿ ಪಡೆಯಲು ಕಾರಣವಾಯಿತು.

ಮುಖ್ಯವಾಗಿ ವೈಭೋಗ ಜೀವನ ಸೇರಿದಂತೆ ಸಾಹಿತ್ಯದ ಕೊಡುಗೆ, ಕಲೆ, ವಾಸ್ತುಶಿಲ್ಪ ಧಾರ್ಮಿಕ ಕಾರಣಗಳಿಂದಾಗಿ ವಿಜಯನಗರವು ತನ್ನದೇಆದ ಕೊಡುಗೆ ನೀಡಿರುವುದು ಸ್ಪಷ್ಟ. ಈ ಸಮಯದಲ್ಲಿ ಸಾಮ್ರಾಜ್ಯದ ವೀಕ್ಷಣೆಗಾಗಿ ದೇಶ-ವಿದೇಶಗಳಿಂದ ಪ್ರವಾಸಿಗರು ಭೇಟಿ ನೀಡಿದ್ದರು. ಅವರುಗಳಲ್ಲಿ ಮುಖ್ಯವಾಗಿ ಅಬ್ದುಲ್ ರಜಾಕ್, ನ್ಯೂನಿಜ್, ಡೋಮಿಂಗೊ ಪಯಾಸ್‌ರವರು ಮೊದಲಾದವರು ಪ್ರಮುಖರಾಗಿದ್ದಾರೆ. ಈ ಸಾಮ್ರಾಜ್ಯ ಕುರಿತು ಪೋರ್ಚುಗೀಸ್ ಪ್ರವಾಸಿಗರಾದ ಡೋಮಿಂಗೊ ಪಯಾಸ್ ವಿಜಯನಗರ ಕುರಿತು ಈ ರೀತಿ ಅಭಿಪ್ರಾಯಪಟ್ಟಿದ್ದಾರೆ. ರೋಮ್ ನಗರದಷ್ಟು ದೊಡ್ಡದಾಗಿದ್ದು, ನೋಡುವುದಕ್ಕೆ ಬಹಳ ಸುಂದರವಾಗಿದೆ. ಪ್ರಪಂಚದಲ್ಲಿಯೇ ಇದಕ್ಕಿಂತ ಸಂಪತ್ಸಮೃದ್ಧಿಯುಳ್ಳ ಪಟ್ಟಣ ಮತ್ತೊಂದಿಲ್ಲ ಎಂದು ಅಭಿಪ್ರಾಯಪಟ್ಟಿರುವುದರಿಂದ ಅಂದಿನ ವಿಜಯನಗರ ಕುರಿತು ಇರುವಂತಹ ಸ್ಥಿತಿಯ ಬಗ್ಗೆ ಪರಿಚಯ ನೀಡುತ್ತವೆ.[೩]

ವಿಜಯನಗರ ಸಾಮ್ರಾಜ್ಯವು ಅನೇಕ ಪ್ರವಾಸಿಗರನ್ನು ಸಂಶೋಧಕರನ್ನು, ಸಾಹಿತ್ಯಾಸಕ್ತರನ್ನು, ಭೂವಿಜ್ಞಾನಿಗಳನ್ನು ಆಕರ್ಷಿಸಿ ಹೊಸ ಹೊಸ ತರಹದ ಚಿಂತನೆಗೆ ಇದು ಅವಕಾಶ ನೀಡುತ್ತಿದೆ. ಈ ಸಾಮ್ರಾಜ್ಯವನ್ನು ಕುರಿತು ಮೊಟ್ಟಮೊದಲಿಗೆ ಬೆಳಕು ಚೆಲ್ಲಿದವರು ವಿದೇಶಿ ವಿದ್ವಾಂಸರಾದ ರಾಬರ್ಟ್ 'ಸಿವೆಲ್‌ರವರು. ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ' (೧೯೬೨) 'A Forgotton Empire (1900) ಎಂಬ ಕೃತಿ ರಚಿಸಿ ಇದರ ಮಹತ್ವದ ಬಗ್ಗೆ ತಿಳಿಸಿದ್ದಾರೆ. ಜಾರ್ಜ್ ಮಿಶೆಲ್‌ರವರು The Vijayanagara Courtly Style (Islamic Architecture at Vijayanagara) (೧೯೯೬) ಕೃತಿಯು ವಿಜಯನಗರ ಕಾಲದಲ್ಲಿ ಇಸ್ಲಾಮಿಕ್ ಕಲೆ ಎಂಬ ವಾಸ್ತುಶಿಲ್ಪದ ಮೇಲೆ ಬೆಳಕು ಚೆಲ್ಲುತ್ತದೆ. ನಂತರ ಈ ವಿಜಯನಗರ ಕುರಿತು ಅನೇಕ ವಿದ್ವಾಂಸರು ವಿವಿಧ ಕ್ಷೇತ್ರಗಳಲ್ಲಿ ಸಂಶೋಧನೆ ಮಾಡಿರುವುದು ಕಾಣಬಹುದು.

ಅದರಲ್ಲಿ ಮುಖ್ಯವಾಗಿ ಬಿ.ಸೂರ್ಯನಾರಾಯಣ ರಾವ್ (೧೯೦೫) 'ಎ ಹಿಸ್ಟರಿ ಆಫ್ ವಿಜಯನಗರ ದಿ ನೆವರ್ ಟು ಬೀ ಫರ್‌ಗಾಟನ್ ಎಂಪೈರ್' ಎಂಬ ಕೃತಿ ರಚಿಸಿದ್ದಾರೆ. ಕೆ.ಈಶ್ವರ ದತ್ತ (೧೯೨೮) 'ಜೀರ್ಣ ವಿಜಯನಗರ ಚರಿತ್ರೆ', ಪಿ.ಬಿ.ದೇಸಾಯಿ (೧೯೩೬) ವಿಜಯನಗರ ಸಾಮ್ರಾಜ್ಯ, ಓ.ರಾಮಚಂದ್ರಯ್ಯನವರ 'ಸ್ಟಡೀಸ್ ಆ್ಯಂಡ್ ಕೃಷ್ಣದೇವರಾಯ ಆಫ್ ವಿಜಯನಗರ', ಪ್ರೊ.ಸಂಶಿ ಭೂಸನೂರಮಠ 'ವಿಜಯ ಕಲ್ಯಾಣ' ವಿಜಯನಗರ ಸಂಸ್ಕೃತಿಯ (ಸಮಗ್ರ ದರ್ಶನ) (೧೯೮೮), ಜಿ.ಎಸ್.ದೀಕ್ಷಿತ್ (೧೯೯೧) 'ಸಂಗಮರ ಕಾಲದ ವಿಜಯನಗರ', ಹೀಗೆ ಹಲವು ಪ್ರಮುಖ ಕೃತಿಗಳನ್ನು ರಚಿಸಿದರು. ಸಿ.ಟಿ.ಎಂ.ಕೊಟ್ರಯ್ಯ 'ವಿಜಯನಗರ ಕಾಲದ ನೀರಾವರಿ ವ್ಯವಸ್ಥೆ', ಕೆ.ಎಸ್.ಶಿವಣ್ಣನವರು ಸಂಪಾದಿಸಿರುವ 'ಸಮಗ್ರ ಕರ್ನಾಟಕ ಚರಿತ್ರೆ' ಡಾ.ಪುರುಷೋತ್ತಮ ಬಿಳಿಮಲೆ ಮತ್ತು ಚೆಲುವರಾಜ 'ಹಂಪಿ ಜಾನಪದ' ಹೀಗೆ ಹಲವು ಕೃತಿಗಳು ವಿಜಯನಗರ ಸಾಮ್ರಾಜ್ಯದ ಇತಿಹಾಸ ಕುರಿತು ಬೆಳಕು ಚೆಲ್ಲುತ್ತವೆ.

ವಿಜಯನಗರ ಕುರಿತು ಇಂದು ಸಾಬಲ್ಟರ್ನ, ಮಾರ್ಕ್ಸ್‌ವಾದ, ವಾಸ್ತವ ನೆಲೆಯಲ್ಲಿನ ಸಿದ್ಧಾಂತ ಮತ್ತು ವಾದಗಳ ಮೂಲಕ ಮರೆಯಾದ ಚರಿತ್ರೆಗೆ ನ್ಯಾಯ ಒದಗಿಸಲು ಪ್ರಯತ್ನ ನಡೆಸಲಾಗಿದೆ. ಈ ಸಾಮ್ರಾಜ್ಯದಲ್ಲಿ ತುಳಿತಕ್ಕೆ ಒಳಗಾದವರು ಶೋಷಣೆಗೆ ಒಳಪಟ್ಟ ಮಹಿಳೆಯರು, ಗುಲಾಮ ಪದ್ಧತಿ, ಬಾಲ ಕಾರ್ಮಿಕರು, ದೇವದಾಸಿಯರು, ಸತಿ ಸಹಗಮನ, ನರಬಲಿ, ಪ್ರಾಣಿಬಲಿ ಮತ್ತು ಮೊದಲಾದ ಅನಿಷ್ಟ ಪದ್ಧತಿಗಳ ಕುರಿತು ಅಧ್ಯಯನ ನಡೆದಿದೆ. ಇಂಡೋ-ಇಸ್ಲಾಮಿಕ್ ಕಲೆ ವಾಸ್ತುಶಿಲ್ಪದ ಪ್ರತ್ಯೇಕ ಅಧ್ಯಯನ ಈವರೆಗೆ ನಡೆದಿಲ್ಲ. ಈ ವಾಸ್ತುಶಿಲ್ಪದ ಬಗ್ಗೆ ಅಧ್ಯಯನವನ್ನು ಮಾಡುವ ಕಿರುಪ್ರಯತ್ನ ಇದಾಗಿದೆ.

ವಿಶ್ವವಿಖ್ಯಾತವಾದ ಪುರಾತನ ಪಟ್ಟಣ ಹಂಪಿಗೆ ಹೊರದೇಶದಿಂದ ಪ್ರವಾಸಿಗರು, ವ್ಯಾಪಾರಿಗಳು ಬಂದು ಹೋಗಿರುವ ವರದಿಗಳ ಆಧಾರದಿಂದಲೂ ಶಾಸನ / ಆಕರ ಸಾಹಿತ್ಯದಿಂದಲೂ ಲಭಿಸಿರುವ ಅನೇಕ ವಿಷಯಗಳನ್ನು ಸಂಶೋಧನೆ ಮಾಡಿ ಹೊಸ ಹೊಸ ಸಂಗತಿಗಳು ಬೆಳಕಿಗೆ ತಂದಿರುವುದು ಶ್ಲಾಘನೀಯ. ಸಂಗ್ರಹಿಸಿ ಅನೇಕ ವಿದ್ವಾಂಸರು ಸಲ್ಲಿಸುತ್ತಿರುವ ಸೇವೆ ಚಿರಸ್ಮರಣೀಯ. ಇತ್ತೀಚೆಗೆ ಹತ್ತು-ಹದಿನೈದು ವರುಷಗಳಿಂದ ಅಮೇರಿಕಾ, ಇಂಗ್ಲೆಂಡ್, ಜಪಾನ್, ಜರ್ಮನಿ ಇತರ ದೇಶಗಳ ವಿಶ್ವವಿದ್ಯಾಲಯ ಅಧ್ಯಯನ ಕೇಂದ್ರಗಳಿಂದ ಬಂದ ಸಂಶೋಧನಾ ತಂಡಗಳು ವಿಜಯನಗರದ ಅಧ್ಯಯನದಲ್ಲೂ ತೊಡಗಿರುವುದು ಈ ಸಾಮ್ರಾಜ್ಯದ ಉನ್ನತಿ ತಿಳಿಸುತ್ತದೆ.

ಒಟ್ಟಾರೆಯಾಗಿ ವಿಜಯನಗರ ಕುರಿತು ಆಧುನಿಕ ಕಾಲದಲ್ಲಿಯೇ ಹೆಚ್ಚಾಗಿ ಇತಿಹಾಸಕಾರರು, ಸಂಶೋಧಕರು, ಸಾಹಿತ್ಯಾಸಕ್ತರು, ಭೂವಿಜ್ಞಾನಿಗಳು ಹೊಸ ಹೊಸ ತರಹದ ಶೋಧನೆಗಳನ್ನು ಮಾಡಿ ಹೊಸ ಮೆರೆಗನ್ನು ತಂದಿದ್ದಾರೆ. ಈಗಾಗಲೇ ಅನೇಕ ಅಲಕ್ಷಿತ ಕ್ಷೇತ್ರ, ಸಂಗತಿಗಳನ್ನು ಕುರಿತು ಅಧ್ಯಯನ ನಡೆದಿದ್ದರೂ ಸಹಾ ಇನ್ನು ಮರೆಯಾದ ಸಂಗತಿಗಳ ಮರುಜೋಡಣೆಯೊಂದಿಗೆ ಈ ಸಾಮ್ರಾಜ್ಯದ ನೈಜವಾದ ಚರಿತ್ರೆಯನ್ನು ಅನಾವರಣಗೊಳಿಸಲಾಗುವುದು. ವಿಜಯನಗರ ಸಾಮ್ರಾಜ್ಯದ ಚರಿತ್ರೆಯ ಉಗಮ, ಔನ್ನತ್ಯ ಮತ್ತು ಅವಸಾನಗಳು ಸಿನಿಮೀಯ ರೀತಿಯಲ್ಲಿ ನಡೆದು ಹೋದಂತೆ ಭಾಸವಾಗುತ್ತದೆ.

## ವಿಜಯನಗರ ಸಾಮ್ರಾಜ್ಯದ ಸ್ಥಾಪನೆ :

೧೪ನೇ ಶತಮಾನದ ಮೊದಲ ಮೂರು ದಶಕಗಳು ದಖ್ಖನ್ ಮತ್ತು ದಕ್ಷಿಣ ಭಾರತದ ಇತಿಹಾಸದ ಒಂದು ಪ್ರಮುಖ ಘಟ್ಟ. ಬಹುಕಾಲದಿಂದಲೂ ನಿರಂತರವಾಗಿ ಅನ್ಯರ ದಾಳಿಯ ಪರಿಣಾಮದಿಂದ ರಾಜಕೀಯ ಸ್ವಾವಲಂಬನೆ, ಧಾರ್ಮಿಕ ಸ್ವಾತಂತ್ರ್ಯ, ಪರಾಧೀನತೆ, ಧಾರ್ಮಿಕ ಜೀವನದ ಅಸ್ಥಿರತೆ ಮತ್ತು ಸಾಂಸ್ಕೃತಿಕ ಹಿನ್ನಡೆಗಳು ಕಂಡುಬಂದು ಅನ್ಯರ ದಾಳಿಯ ದಿಗ್ವಿಜಯದಿಂದ ಬಲತ್ಕಾರವಾಗಿ ಹೇರಲ್ಪಟ್ಟ ಅಧಿಕಾರದ ಮುಂದುವರಿಕೆಯ ಈ ಸಂದರ್ಭದಲ್ಲಿ ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ರಕ್ಷಣೆಯನ್ನು ಸಂರಕ್ಷಿಸುವ ಹಾಗೂ ಅನ್ಯರ ದಾಳಿಯನ್ನು ತಡೆಗಟ್ಟಲು ಸ್ಥಾಪನೆಯಾದ ಸಾಮ್ರಾಜ್ಯವೇ ವಿಜಯನಗರ ಆಗಿದೆ.

ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಅನೇಕ ಕಾರಣಗಳಿವೆ. ಉತ್ತರ ಭಾರತದಿಂದ ಮುಸ್ಲಿಂ ದಾಳಿ ತಡೆಗಟ್ಟುವ ಸಲುವಾಗಿ ಈ ಸಾಮ್ರಾಜ್ಯ ಉದಯವಾಗಿತ್ತೆಂದು ಹೇಳಲಾಗುತ್ತದೆ. ವಿಜಯನಗರ ಸ್ಥಾಪನೆಯ ಪೂರ್ವದಲ್ಲಿ ಉತ್ತರ ಭಾಗದಲ್ಲಿ ಅಲ್ಲಾವುದ್ದೀನ್ ಖಿಲ್ಜಿ ೧೨೯೬-೧೩೧೬ರಲ್ಲಿ ಆಳ್ವಿಕೆ ನಡೆಸುತ್ತಿದ್ದ. ಇವನ ಕಾಲದಲ್ಲಿ ಮೊಗಲರು ಪದೇ ಪದೇ ಈತನ ರಾಜ್ಯದ ಮೇಲೆ ದಾಳಿ ಮಾಡಿದಾಗ ಬಲಿಷ್ಠ ಸೈನ್ಯವನ್ನು ಸ್ಥಾಪಿಸಲು ಈತನ ಧನ ಸಹಾಯಕ್ಕಾಗಿ ಅನ್ಯಮಾರ್ಗವಾಗಿ ದಕ್ಷಿಣ ಭಾಗದ ಮೇಲೆ ದಾಳಿ ಮಾಡಲು ಪ್ರಾರಂಭಿಸಿದನು.[೪] ಮತ್ತೊಂದು ಅಭಿಪ್ರಾಯದ ಪ್ರಕಾರ ಕ್ರಿ.ಶ. ೧೨೦೬ರಲ್ಲಿ ಸ್ಥಾಪನೆಯಾದ ದೆಹಲಿ ಸುಲ್ತಾನರ ಸಾಮ್ರಾಜ್ಯವು ಸಂಪೂರ್ಣ ಉತ್ತರ ಭಾರತವನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದರು. ಈಗ ಅವರು ದಕ್ಷಿಣ ಭಾರತದ ಕಡೆಗೆ ತಮ್ಮ ಗಮನವನ್ನು ಹರಿಸಿದರು.

ಈ ಸಂದರ್ಭದಲ್ಲಿ ದಕ್ಷಿಣದಲ್ಲಿ ದೇವಗಿರಿಯ ಸೇವುಣರು, ವಾರಂಗಲ್ಲನ ಕಾಕತೀಯರು, ದ್ವಾರಸಮುದ್ರದ ಹೊಯ್ಸಳರು ಮತ್ತು ಮಧುರೆಯ ಪಾಂಡ್ಯರು ಆಳ್ವಿಕೆ ನಡೆಸುತ್ತಿದ್ದರು.[೫] ಈ ರಾಜ್ಯಗಳು ತಮ್ಮ ಆಳ್ವಿಕೆಯಲ್ಲಿ ಅತ್ಯಂತ ಅವಸಾನದ ಸ್ಥಿತಿ ತಲುಪಿದ್ದವು. ಕ್ರಿ.ಶ. ೧೨೯೩ ರಿಂದ ೧೩೦೬ರಲ್ಲಿ ಅಧಿಕಾರಕ್ಕೆ ಬಂದ ಖಿಲ್ಜಿಯು ಇಡೀ ದಕ್ಷಿಣ ಭಾರತವನ್ನು ಗೆಲ್ಲಲು ಮುಂದಾದನು. ಅದಕ್ಕಾಗಿ ತನ್ನ ಸಮರ್ಥ ದಂಡನಾಯಕ ಮಲ್ಲಕಾಫರನ ಮೂಲಕ ಕ್ರಿ.ಶ. ೧೩೦೯ರಲ್ಲಿ ದೇವಗಿರಿಯನ್ನು ಮೂರನೆಯ ದಂಡೆಯಾತ್ರೆಯಲ್ಲಿ ಸಂಪೂರ್ಣವಾಗಿ ಸೇವುಣರನ್ನು ಸೋಲಿಸಿ ಶರಣಾಗತವಾಗುವಂತೆ ಮಾಡಿದನು. ಕ್ರಿ.ಶ. ೧೩೧೧ರಲ್ಲಿ ದ್ವಾರಸಮುದ್ರಕ್ಕೆ ಮುತ್ತಿಗೆ ಹಾಕಿ ಹೊಯ್ಸಳರ ಮೂರನೇ ಬಲ್ಲಾಳನನ್ನು ಸೋಲಿಸಿ ದ್ವಾರಸಮುದ್ರವನ್ನು (ಕರಾವಳಿ ಪ್ರದೇಶವನ್ನು) ವಶಪಡಿಸಿಕೊಂಡರು.[೬] ಹೀಗೆ ಹಲವು ರಾಜ್ಯಗಳನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡು ಕ್ರಿ.ಶ. ೧೩೦೯ ರಿಂದ ೧೩೧೧ರ ವರೆಗೂ ದಕ್ಷಿಣ ದೇಶದಲ್ಲಿ ವಾರಂಗಲ್, ದ್ವಾರಸಮುದ್ರ, ತಿರುಣ್ಣಮಲೈ, ಕಂಚಿ, ಶ್ರೀರಂಗಂ, ಮಧುರೈ ರಾಮೇಶ್ವರ ಮೊದಲಾದ ಪ್ರದೇಶಗಳು ಇವರ ಅಧೀನಕ್ಕೆ ಒಳಪಟ್ಟವು.

ಕ್ರಿ.ಶ. ೧೩೩೦ರ ಸಂದರ್ಭದಲ್ಲಿ ಸಣ್ಣ ಪುಟ್ಟ ರಾಜವಂಶಗಳು ತಮ್ಮ ತಮ್ಮಲ್ಲಿಯೇ ಒಳಜಗಳ, ಪಿತೂರಿಗಳಿಂದ ರಾಜಕೀಯ ಅಟ್ಟಹಾಸವನ್ನು ಮೆರೆಸುತ್ತಿದ್ದವು. ಕ್ರಿ.ಶ. ೧೩೨೫ರಲ್ಲಿ ಮಹಮ್ಮದ್ ಬಿನ್ ತೊಘಲಕ್ ಸಿಂಹಾಸನವನ್ನು ಏರಿದಾಗ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿತು. ಈತನ ಅಸಮಾನ್ಯ ನಡವಳಿಕೆ ಹಾಗೂ ದೆಹಲಿಯಿಂದ ರಾಜಧಾನಿಯನ್ನು ದೇವಗಿರಿಗೆ ವರ್ಗಾಯಿಸುವ ಸಂಗತಿ ಮುಖ್ಯವಾದದ್ದು. ಹಿಂದೂ ಧರ್ಮದ ಪ್ರಾಂತ್ಯಗಳ ಆಳ್ವಿಕೆ ಹಳೆಯ ರಾಜಮನೆತನಗಳ ವಿನಾಶ. ಅವರ ಧರ್ಮ, ಗುಡಿ ಮತ್ತು ಪಟ್ಟಣಗಳ ನಾಶ ದಕ್ಷಿಣದ ನಿವಾಸಿಗಳಿಗೆ ಅಪ್ರಿಯವಾಗಿದ್ದುದ್ದೆಲ್ಲ ತತ್ತರಿಸಿ ಬೀಳುವಂತೆ ತೋರಿತು. ಇದರಿಂದಾಗಿ ವಿದೇಶಿ ದಾಳಿಗೆ ತೆರೆ ಎಳೆಯಲು ಮೊದಮೊದಲು ಅಡ್ಡಿಪಡಿಸಿ, ಪ್ರತಿರೋಧ, ಭದ್ರಕೋಟೆ ಕಟ್ಟಲು ಪ್ರಾರಂಭಿಸಿದರು.[೭]

ಇಂಥ ಅಸಹಾಯಕ ಸ್ಥಿತಿಯಲ್ಲಿ ಪ್ರಮುಖ ಪಾತ್ರ ವಹಿಸಿದವರೆಂದರೆ ಅಂದಿನ ದೇವಸ್ಥಾನ, ಮಠ ಹಾಗೂ ಆಶ್ರಮಗಳಂಥ ಧಾರ್ಮಿಕ ಸಂಸ್ಥೆಗಳ ಮುಖ್ಯಸ್ಥರು, ಆಚಾರ್ಯರು, ಸ್ವಾಮಿಗಳು ಅಂದಿನ ಹಂಪಿಯ ಪರಿಸರದಲ್ಲಿ ಪ್ರಸಿದ್ಧಿ ಪಡೆದ ಪಾಶುಪಥ (ಕಾಳಾಮುಖ) ಆಚಾರ್ಯರೆಂದರೆ 'ಕ್ರಿಯಾಶಕ್ತಿ ಪಂಡಿತರು' ಮುಖ್ಯಸ್ಥರು. ಇವರಿಗೆ ಕ್ರಿಯಾಶಕ್ತಿ ವಿದ್ಯಾರಣ್ಯ, ಕ್ರಿಯಾಶಕ್ತಿ ದೇವತೆ, ಶ್ರೀವಿಲಾಸ ಕ್ರಿಯಾಶಕ್ತಿ ಇತರೆ ಹೆಸರಿನಲ್ಲಿ ಬಣ್ಣಿಸುತ್ತಾರೆ. ಸಂಗಮ ಸಹೋದರರ ಕುಲಗುರುಗಳು ಆಗಿದ್ದುದ್ದನ್ನು ಅನೇಕ ಶಾಸನಗಳು ತಿಳಿಸುತ್ತವೆ. ಈ ಗುರುಗಳು ಮುಸ್ಲಿಂ ದಾಳಿಯನ್ನು ತಡೆಗಟ್ಟಲು ಪ್ರಬಲರಾದವರೆಂದರೆ ಸಂಗಮ ಸಹೋದರರೆಂದು ಅರಿತರು. ಇವರಲ್ಲಿ ವಿಶ್ವಾಸ ಮೂಡಿಸಲು ಕಂಕಣ ಬದ್ಧರಾದವರು ಇದರಿಂದ ಸಹೋದರರಿಗೆ ಬೆಂಬಲ ನೀಡಲು ಸಿದ್ಧರಾದವರು ವಿದ್ಯಾರಣ್ಯರು.[೯]

ಜೊತೆಗೆ ಇದೇ ಸಂದರ್ಭದಲ್ಲಿ ವೀರಬಲ್ಲಾಳನು ವೃದ್ಧನಾಗಿದ್ದು ಈತನ ಮಗ ನಾಲ್ಕನೆಯ ಬಲ್ಲಾಳನು ಅಸಮರ್ಥನಾಗಿದ್ದನು. ಹೀಗಾಗಿ ಬಲ್ಲಾಳನು ತನ್ನ ವಿಶ್ವಾಸಕ್ಕೆ ಮತ್ತು ನಂಬಿಕೆಗೆ ಪಾತ್ರನಾಗಿದ್ದ ತನ್ನ ಜೊತೆಗೂಡಿ ಶತೃಗಳ ಮೇಲೆ ಯುದ್ಧ ಮಾಡಿಸಿ ಪ್ರಾಂತೀಯ ಅಧಿಕಾರಿ ಒಂದನೆಯ ಹರಿಹರನು ಸಮರ್ಥನೆಂದು ನಿರ್ಧರಿಸಿ ಸಾಮ್ರಾಜ್ಯದ ಮೂರನೆಯ ರಾಜಧಾನಿಯಾದ ಹೊಸಪಟ್ಟಣ (ಹಂಪಿ) ರಾಜಪಾಲನನ್ನಾಗಿ ನೇಮಿಸಿದನು. ಅಲ್ಲದೇ ಅಗತ್ಯವಾದ ಎಲ್ಲಾ ಸ್ವಾತಂತ್ರ್ಯವನ್ನು ನೀಡಿ ಪ್ರೋತ್ಸಾಹಿಸಿದನು.

ಹೀಗೆ ಸಂಗಮ ವಂಶದ ಹರಿಹರನ ನೇಮಕವೇ ಮುಂದೆ ವಿಜಯನಗರ ಸಾಮ್ರಾಜ್ಯದ ಉಗಮಕ್ಕೆ ಕಾರಣವಾಯಿತು ಎಂಬುದು ಶ್ರೀಕಂಠಯ್ಯನವರ ಅಭಿಪ್ರಾಯವಾಗಿದೆ.[೧೦] ಜೊತೆಗೆ ಕ್ರಿ.ಶ. ೧೩೪೦ ಶಾಸನದಲ್ಲಿ ಚಾಮರಸನೆಂಬ (ಹರಿಹರ) ಅಧಿಕಾರಿಯು ಬಾದಾಮಿಯಲ್ಲಿ ಒಂದು ಕೋಟೆ ಕಟ್ಟಿಸಿದುದನ್ನು ತಿಳಿಸುತ್ತದೆ. ಹರಿಹರನು ಮೂರನೆಯ ಬಲ್ಲಾಳ ಮಹಾಮಂಡಲೀಶ್ವರನಾಗಿದ್ದನೆಂಬುದು ತಿಳಿದುಬರುತ್ತದೆ.

ತುಂಗಭದ್ರೆಯಿಂದ ಕಾವೇರಿವರೆಗಿನ ವಿಶಾಲವಾದ ಹೊಯ್ಸಳರ ರಾಜ್ಯದಲ್ಲಿ ಸಂಗಮನ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತು. ವಿಜಯನಗರವು ೧೩೩೬ರಲ್ಲಿ ಸಾಮಾನ್ಯವಾಗಿ ಸ್ಥಾಪನೆಯಾಯಿತೆಂದು ಒಂದು ಅಭಿಪ್ರಾಯವಾದರೆ ಮತ್ತೊಂದು ಅಭಿಪ್ರಾಯ ೧೩೪೬ರಲ್ಲಿ ತಿಳಿದುಬರುತ್ತದೆ. ಆದರೆ ಇದಕ್ಕೆ ಸ್ಪಷ್ಟವಾದ ಆಧಾರಗಳಿಲ್ಲ. ಒಟ್ಟಿನಲ್ಲಿ ಸಂಗಮ ಸಹೋದರರು ಮುಖ್ಯವಾಗಿ ಹರಿಹರ ಬುಕ್ಕರೇ ವಿಜಯನಗರ ಸ್ಥಾಪನೆಗೆ ಕಾರಣರೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ.[೧೧] ವಿಜಯನಗರ ಸ್ಥಾಪಕ ಮೂಲ ವಿಚಾರಗಳ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ಒಂದು ಮೂಲದ ಪ್ರಕಾರ ಇವರು ಆಂಧ್ರರೆಂದು ಹೇಳಿದರೆ, ಮತ್ತೊಂದು ಮೂಲದ ಪ್ರಕಾರ ಇವರನ್ನು ಕನ್ನಡಿಗರೆಂದು ತಿಳಿಸುತ್ತದೆ. ಮುಖ್ಯವಾಗಿ ಗಮನಿಸುವಾಗ ವಿಜಯನಗರದ ಹರಿಹರ ಬುಕ್ಕರು ತೆಲುಗು ಮೂಲದವರೆಂದು ಒಂದು ವಾದವಿದೆ. ಈ ಪ್ರಕಾರ ಹರಿಹರ ಬುಕ್ಕರು ವಾರಂಗಲ್ಲನ ಪ್ರತಾಪರುದ್ರನ ಆಸ್ಥಾನದಲ್ಲಿ ಸಚಿವ ಹಾಗೂ ಕೋಶಾಧಿಕಾರಿಗಳಾಗಿ ಆಳ್ವಿಕೆ ನಡೆಸುತ್ತಿದ್ದರು. ಈ ರಾಜ್ಯವನ್ನು ಸುಲ್ತಾನ ವಶಪಡಿಸಿಕೊಂಡ ನಂತರ ಈ ಸಹೋದರರು ಆನೆಗೊಂದಿ ಅಥವಾ ಕಂಪಲಿಗೆ ಬಂದರೆಂದು, ಅಲ್ಲಿ ಸ್ವಾತಂತ್ರ್ಯವಾಗಿ ವಿಜಯನಗರ ಸ್ಥಾಪಿಸಿದರು.

ಆದ್ದರಿಂದ ಇವರು ತೆಲುಗು ಮೂಲದವರೆಂಬ ವಾದವಿದೆ. ಆದರೆ ಅನೇಕ ಶಾಸನಗಳು ಸಮಕಾಲೀನ ಗ್ರಂಥಗಳಲ್ಲಿ ಇವರು ಕನ್ನಡಿಗರು, ಕನ್ನಡ ಮೂಲದವರೆಂಬುದಕ್ಕೆ ಸಾಕಷ್ಟು ಸಾಕ್ಷಿ ದೊರೆಯುತ್ತವೆ.

೧. ಕ್ರಿ.ಶ. ೧೩೪೨ರ ವೇಳೆಗೆ ಹರಿಹರನು ಕೊಂಕಣ ಪ್ರದೇಶದಲ್ಲಿ ಅಧಿಕಾರಿಯಾಗಿದ್ದನು. ಇದನ್ನು ವಿರೋಧಿಸುವವರು ಇರಲಿಲ್ಲ. ಹೊನ್ನಾವರದಲ್ಲಿದ್ದ ಮುಸ್ಲಿಂ ಅಧಿಕಾರಿಯು ಸಹಾ ಹರಿಹರನಿಗೆ ಕಪ್ಪಕಾಣಿಕೆಯನ್ನು ಸಲ್ಲಿಸುತ್ತಿದ್ದನೆಂದು ಇಬ್ನಬತೂತ ಹೇಳುತ್ತಾನೆ. ಮತ್ತೊಂದು ಪ್ರಮುಖವಾದ ಅಂಶವೆಂದರೆ ೧೩೪೬ರ ಶೃಂಗೇರಿ ಶಾಸನ ಈ ಸಂದರ್ಭದಲ್ಲಿ ಪರಿಗಣಿಸಬೇಕಾದ ಶಾಸನವಾಗಿದೆ. ಈ ಸಂದರ್ಭದಲ್ಲಿ ಹರಿಹರನು ದೇಶವನ್ನು ವಿದೇಶಿಯರಿಂದ ಮುಕ್ತಗೊಳಿಸಿರುವ ನೆನಪಿಗಾಗಿ ತನ್ನ ನಾಲ್ವರು ಸಹೋದರರೊಂದಿಗೆ ಶೃಂಗೇರಿಗೆ ಭೇಟಿ ನೀಡಿ ಅನೇಕ ದಾನದತ್ತಿಗಳನ್ನು ಮಾಡಿದನೆಂದು ತಿಳಿಸುತ್ತದೆ. ಕ್ರಿ.ಶ. ೧೩೩೬ರ ಏಪ್ರಿಲ್ ೧೮ರಂದು ವಿಜಯನಗರ ಶಂಕುಸ್ಥಾಪನೆ ನೆರವೇರಿಸಿದರೆಂದು, ಇವರು ಕನ್ನಡಿಗರು ಎಂದು ತಿಳಿಸುತ್ತದೆ.[೧೨]

೨. ಸಂಗಮ ವಂಶದ ಕಂಪಣನರಾಣಿಯಾದ ಗಂಗಾದೇವಿ ವಿರಚಿತ ಕೃತಿಯಾದ 'ಮಧುರ ವಿಜಯಂ'ನಲ್ಲಿಯೂ ಸಹಾ ವಿಜಯನಗರ ಅರಸರು ಕನ್ನಡಿಗರೆಂದು ಸ್ಪಷ್ಟವಾಗಿ ತಿಳಿಸಲಾಗಿದೆ.[೧೩]

ಆಂಧ್ರ-ತಮಿಳುನಾಡಿನಲ್ಲಿ ದೊರೆತಿರುವ ವಿಜಯನಗರದ ಶಾಸನಗಳು ಹೆಚ್ಚಾಗಿ ಕನ್ನಡ ಲಿಪಿಯಲ್ಲಿವೆ. ಜೊತೆಗೆ ಶ್ರೀ ಕೃಷ್ಣದೇವರಾಯನ ಆಸ್ಥಾನ ಕವಿ ಅಲ್ಲಾಸಾನಿ ಪೆದ್ದಣ್ಣ ಕೂಡ ಕೃಷ್ಣದೇವರಾಯನನ್ನು 'ಕನ್ನಡ ರಾಜ್ಯ ರಮಾರಮಣ' ಎಂದು ಹೊಗಳಿರುವುದನ್ನು ಇತ್ತೀಚೆಗೆ ಆಂಧ್ರದ ಖ್ಯಾತ ಇತಿಹಾಸ ತಜ್ಞರಾದ ಕೆ.ಸತ್ಯನಾರಾಯಣರವರು ಸಹಾ ವಿಜಯನಗರ ಅರಸರು ಕನ್ನಡಿಗರು, ಕರ್ನಾಟಕದವರು ಎಂದು ವಾದಿಸಿದ್ದಾರೆ. ಈ ಬಗ್ಗೆ ಅನೇಕ ದಾನ ಶಾಸನಗಳಲ್ಲಿ ಅವರನ್ನು ಕರ್ನಾಟಕದ ಅರಸರೆಂದು ರಾಜರನ್ನು ಪ್ರಭುಗಳೆಂದು ಹೇಳಿರುವುದರಿಂದ ಹಾಗೂ ಕನ್ನಡ ಭಾಷೆಯಲ್ಲಿ ಶ್ರೀ ವಿರೂಪಾಕ್ಷನೆಂಬ ಶಾಸನದಲ್ಲಿ ಸಹಿ ಮಾಡಿರುವುದರಿಂದ ಇವರು ಕನ್ನಡಿಗರೆಂಬುದಕ್ಕೆ ಸಾಕ್ಷ್ಯಾಧಾರಗಳಿವೆ ಎನ್ನುತ್ತಾರೆ. ಜೊತೆಗೆ ಪೋರ್ಚುಗೀಸ್ ಪ್ರವಾಸಿಗರು ವಿಜಯನಗರ ಅರಸರು ಆಚರಿಸುವ ಹೊಸ ವರ್ಷದ ಹಬ್ಬವು ಸಹ ಕನ್ನಡ ವರ್ಷವೇ ಆಗಿತ್ತು ಎಂದು ತಿಳಿಸುತ್ತಾರೆ. ವಿಜಯನಗರದ ಅನೇಕ (ತಾಮ್ರ) ಸಂಸ್ಕೃತ ಶಾಸನಗಳಲ್ಲಿಅರಸರಿಗೆ 'ಕರ್ನಾಟಕ ಕ್ಷಿತಿನಾಥ', ಭಾಷೆಗೆ ತಪ್ಪುವ ರಾಯರ ಗಂಡ, ಕನ್ನಡ ರಾಜ್ಯರಮಾರಮಣ ಮುಂತಾದ ಬಿರುದುಗಳಿದ್ದವು. ಇದು ಇವರು ಕನ್ನಡಗಿರೆಂಬುದಕ್ಕೆ ಸಾಕ್ಷಿಯಾಗಿವೆ.[೧೪] ಸಂಗಮ ವಂಶವು ಕ್ರಿ.ಶ. ೧೩೩೬ರಲ್ಲಿ ಹರಿಹರ, ೧ನೆಯ ಬುಕ್ಕ, ಕಂಪಣ್ಣ, ಮಾರಪ್ಪ ಮತ್ತು ಮುದ್ದಪ್ಪ ಎಂಬ ಸಹೋದರರಿಂದ ಸ್ಥಾಪನೆಯಾಯಿತು. ಇವರು ಸಂಗಮ ವಂಶದವರೆಂದು ಕರೆಯಲಾಗಿದೆ. ಕ್ರಿ.ಶ. ೧೩೩೬ ರಿಂದ ೧೪೮೫ರ ವರೆಗೆ ೯ ಜನ ಅರಸರು ಆಳ್ವಿಕೆ ನಡೆಸಿರುವುದು ತಿಳಿದುಬರುತ್ತದೆ.

೧ನೆಯ ಹರಿಹರನು ವಿಜಯನಗರಕ್ಕೆ ಅಸ್ತಿಭಾರವನ್ನು ಹಾಕಿ ರಾಜ್ಯವನ್ನು ಬಾದಾಮಿವರೆಗೆ ವಿಸ್ತರಿಸಿದನು.[೧೫] ನಂತರ ಕ್ರಿ.ಶ. ೧೩೫೬ರಲ್ಲಿ ೧ನೆಯ ಬುಕ್ಕನು ಸಿಂಹಾಸನಕ್ಕೆ ಬಂದು ದಕ್ಷಿಣ ಭಾರತದ

ಅನೇಕ ವೈರಿಗಳನ್ನು ತಮ್ಮ ಮಗ ೨ನೆಯ ಕಂಪಣನ ಸಹಾಯದಿಂದ ಸ್ಥಾಪಿಸಿದನು. ಈತನ ಕಾಲದಲ್ಲಿ ಬಹುಮನಿ ಸುಲ್ತಾನನೊಡನೆ ಮತ್ತೆ ಮತ್ತೆ ಯುದ್ಧಗಳನ್ನು ಕೈಗೊಳ್ಳಬೇಕಾಯಿತು. ಮುಖ್ಯವಾಗಿ ಗುಲ್ಬರ್ಗಾದ ಮಹಮ್ಮದ್ ಷಾ ಮತ್ತು ಅನಂತರ ಬಂದ ಮುಜಾಹಿದ್ ಇವರೊಡನೆ ಅನೇಕ ಯುದ್ಧಗಳು ನಡೆದವು. ಈತನ ಕಾಲದಲ್ಲಿ ಸಂಭವಿಸಿದ ಮುಖ್ಯ ಘಟನೆಯೆಂದರೆ, ಈತನ ಮಗನಾದ ಕುಮಾರ ಕಂಪಣನು ಮಧುರೈ ದಂಡೆಯಾತ್ರೆಯಾಗಿದೆ. ಆದರೆ ೨ನೆಯ ಬುಕ್ಕನು ಬಹುಬೇಗನೆ ಪುತ್ರವಿಯೋಗ ಅನುಭವಿಸಬೇಕಾಯಿತು. ಇವರ ಕಾಲದಲ್ಲಿ ಒಡೆಯರ್, ಮಹಾ ಮಂಡಲೀಶ್ವರನಾಗಿ ಮಾತ್ರ ಕಂಡುಬರುತ್ತಾರೆ. ಆದರೆ ೨ನೆಯ ಹರಿಹರನ ಕಾಲದಿಂದ ಚಕ್ರವರ್ತಿ ಎಂಬ ಬಿರುದು ಪಡೆದು ಆಳ್ವಿಕೆ ನಡೆಸಿದ್ದಾರೆ. ಇವನ ಕಾಲದಲ್ಲಿ ಭಾರೀ ಕ್ಷಾಮವು ಕಾಣಿಸಿಕೊಂಡಿತ್ತು. ಆಗ ಪ್ರಜೆಗಳ ಯೋಗಕ್ಷೇಮಕ್ಕಾಗಿ ಅನೇಕ ಕೆರೆ-ಕಾಲುವೆಗಳ ನಿರ್ಮಾಣ ಕೈಗೊಂಡನು. ಇವರ ಕಾಲದಲ್ಲಿ ಪ್ರಮುಖ ಎಂಜಿನಿಯರ್‌ಗಳಿದ್ದರು. ಆಗ ಹೈಡ್ರಲಿಕ್‌ನ ಮೂಲಕ ಹೆನ್ನೆ ನದಿಯಿಂದ ಒಂದು ಕಾಲುವೆಯನ್ನು ನಿರ್ಮಿಸಿ ಪೆನುಗೊಂಡೆಗೆ ನೀರನ್ನು ಒದಗಿಸಿದ್ದನು. ಕನ್ನಡ ಸಾಹಿತ್ಯಕ್ಕೆ ಸಾಕಷ್ಟು ಪ್ರೋತ್ಸಾಹಿಸಿದನು. ಇದರಿಂದಾಗಿ ಈತನಿಗೆ 'ವೈದಿಕಮಾರ್ಗಸ್ಥಾಪನಾಚಾರ್ಯ' ಬಿರುದು ನೀಡಿ 'ಕರ್ನಾಟಕ ವಿದ್ಯಾವಿಲಾಸ' ಎಂದು ಕರೆಯಲಾಗಿದೆ.[೧೬]

ಕ್ರಿ.ಶ ೧೪೦೪ರಿಂದ ೨ನೆಯ ಬುಕ್ಕನು ಸಿಂಹಾಸನಕ್ಕೆ ಬಂದನು. ಈತನ ಅಕಾಲ ಮೃತ್ಯುವಿನಿಂದ ಕ್ರಿ.ಶ. ೧೪೦೬ರಲ್ಲಿ ೧ನೆಯ ದೇವರಾಯನು ಸಿಂಹಾಸನಕ್ಕೆ ಬಂದನು. ಈತನು ಆಂಧ್ರದ ರೆಡ್ಡಿಗಳೊಂದಿಗೆ ಹಾಗೂ ಫೈರೂಜಾಶಾಹ ಬಹಮನಿಯೊಂದಿಗೆ ಮುದಗಲ್ಲಿನ ರೈತನೊಬ್ಬನ ಮಗಳನ್ನು ರಾಣಿಯನ್ನಾಗಿ ಪಡೆಯಲು ಈತನು ಕೈಗೊಂಡ ಸಾಹಸದ ಕಥೆಯನ್ನು ಚರಿತ್ರೆಕಾರ ಫೆರಿಷ್ತ (Firishata) ದೀರ್ಘವಾಗಿ ವರ್ಣಿಸಿದ್ದಾನೆ. ಜೊತೆಗೆ ಈತನ ಕಾಲದಲ್ಲಿ ಇಟಲಿ ದೇಶದ ನಿಕಲೋಕೊಂಟಿಯ ಎಂಬ ಯಾತ್ರಿಕನು ವಿಜಯನಗರದ ವೈಭವ ಕುರಿತು ಪರಿಚಯ ನೀಡಿದ್ದಾನೆ. ಈತನ ಮಗನಾದ ವೀರ ವಿಜಯರಾಯನು ಕ್ರಿ.ಶ. ೧೪೧೨ ರಿಂದ ೧೩ರ ವರೆಗೆ ಐದಾರು ವರುಷಗಳ ಆಳ್ವಿಕೆಯನ್ನು ನಡೆಸಿದನು.

ಇವನ ನಂತರ ೨ನೆಯ ದೇವರಾಯನು ಸಿಂಹಾಸನಕ್ಕೆ ಬಂದನು. ಈತನ ಆಳ್ವಿಕೆಯಲ್ಲಿ (ಸಂಗಮ ವಂಶದಲ್ಲಿ) ಪ್ರಮುಖವಾಗಿ ಇಂಡೋ-ಇಸ್ಲಾಮಿಕ್ ಕಲೆಗೆ ಹೆಚ್ಚು ಮಹತ್ವ ನೀಡಿದನು. ದೊರೆ ಈತನಿಗೆ 'ಗಜವೇಂಟೇಗಾರ' ಎಂಬ ಬಿರುದಿತ್ತು. ಈತನೂ ಸಂಗಮ ವಂಶದಲ್ಲಿ ಪ್ರಸಿದ್ಧನಾದ ದೊರೆಯಾಗಿದ್ದನು. ಇವನ ಕಾಲದಲ್ಲಿ ಪರ್ಶಿಯಾ ದೇಶದ ಅಬ್ದುಲ್ ರಜಾಕನು ವಿಜಯನಗರಕ್ಕೆ ಭೇಟಿ ನೀಡಿದನು. ೨ನೆಯ ದೇವರಾಯನು ಉನ್ನತ ಗೆಳೆಯ ಅಬ್ದುಲ್ ರಜಾಕ್ ಈತನನ್ನು ಕೊಂಡಾಡಿದ್ದಾನೆ. ಈತನ ಕಾಲದಲ್ಲಿ ಸಾಮ್ರಾಜ್ಯವು ಸಿಲೋನಿಂದ ಹಿಡಿದು ಗುಲ್ಬರ್ಗಾದವರೆಗೂ ಒರಿಸ್ಸಾ-ಬಂಗಾಳಗಳಿಂದ ಮಲಬಾರಿನವರೆಗೂ ಈತನು ರಾಜ್ಯವನ್ನು ವಿಸ್ತರಿಸಿದನು.

ಅಬ್ದುಲ್ ರಜಾಕನ ಪ್ರಕಾರ ಇಡೀ ಪ್ರಪಂಚದಲ್ಲಿಯೇ ಇಂತಹ ಇನ್ನೊಂದು ಸಾಮ್ರಾಜ್ಯವನ್ನು ಕಣ್ಣಿದ್ದವರು ನೋಡಲಾರರು. ಕಿವಿಯಿದ್ದವರು ಕೇಳಲಾರರು ಎನ್ನುವ ಮಾತುಗಳನ್ನು ಹೃದಯ ತುಂಬಿ

ನುಡಿದಿರುವುದರಿಂದ ವಿಜಯನಗರ ಭವ್ಯ ಇತಿಹಾಸವನ್ನು ವರ್ಣಿಸಿದ್ದಾನೆ. ಇವನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಸುಭಿಕ್ಷವಾಗಿತ್ತು ಎಂದು ತಿಳಿದುಬರುತ್ತದೆ. ಈತನು ಸಾಹಿತ್ಯ, ಕಲೆ, ವಾಸ್ತುಶಿಲ್ಪಕ್ಕೆ ವಿಶೇಷ ಪ್ರೋತ್ಸಾಹ ನೀಡಿದನು.

ಇವನ ನಂತರ ತಮ್ಮನಾದ ಪ್ರತಾಪ ದೇವರಾಯ (೩ನೆಯ ವಿಜಯ) ಅಲ್ಪಕಾಲ ಆಳಿದನು. ನಂತರ ಮಗನಾದ ಮಲ್ಲಿಕಾರ್ಜುನ ಈತನು ತಂದೆಯಂತೆ ಸಮರ್ಥನಾಗಿರಲಿಲ್ಲ. ಆದರೆ ಈತನ ಆಡಳಿತಾವಧಿಯಲ್ಲಿ ಬಹುಮನಿ ಸುಲ್ತಾನನು ಹಾಗೂ ಕಪಿಲೇಶ್ವರ ಗಜಪತಿಯೂ ವಿಜಯನಗರ ಸಾಮ್ರಾಜ್ಯದ ಮೇಲೆ ಆಕ್ರಮಣ ಮಾಡಿದರೂ ಸಹ ವಿಜಯನಗರ ಸೈನ್ಯವು ಅವರನ್ನು ಹಿಮ್ಮೆಟಿಸಿದರೂ ಸಹ ಅನೇಕ ಪ್ರದೇಶಗಳನ್ನು ಒರಿಸ್ಸಾ ದೇಶದ ಹಮ್ಮೀರನು ವಶಪಡಿಸಿಕೊಂಡನು. ಇದು ಮಲ್ಲಿಕಾರ್ಜುನನನ್ನು ಕಂಗೆಡಿಸಿತು. ಭವಿಷ್ಯದ ಹಾಗೂ ಸಾಮ್ರಾಜ್ಯದ ಮಾರಕವಾಗುವಂತೆ ತೋರಿದಾಗ, ಎಲ್ಲೆಲ್ಲೂ ಗೊಂದಲ, ಅವಿಧೇಯತೆ ಕಂಡುಬಂದವು. ಇದರಿಂದಾಗಿ ಈತನು ಅಧಿಕಾರದಿಂದ ಪದಚ್ಯುತನಾಗಿ (೩ನೆಯ) ಮಲ್ಲಿಕಾರ್ಜುನ ಮಗನಾದ ರಾಜಶೇಖರ ಹಕ್ಕನ್ನು ತಿರಸ್ಕರಿಸಿ ೩ನೆಯ ವಿರೂಪಾಕ್ಷನು ಪಟ್ಟಕ್ಕೆ ಬಂದನು.

ಈತನು ಅಸಮರ್ಥ ಆಡಳಿತಗಾರನಾಗಿ ಸುಖಭೋಗ, ದುಶ್ಚಟಗಳಿಗೆ ಬಲಿಯಾದ ಕಾರಣ ಅನೇಕ ರಾಜ್ಯಗಳು ದಾಳಿ ನಡೆಸಿದವು. ಆದರೆ ಈತನು ಆಕ್ರಮಣ ಮಾಡಿದ ರಾಜ್ಯಗಳಿಗೆ ಯುದ್ಧ ಮಾಡಿದ್ದಕ್ಕಿಂತ ಮಿಗಿಲಾಗಿ ಲಂಚವನ್ನು ಕೊಟ್ಟು ಬೇಟ್ಕ ಕೋಟೆಯನ್ನು ವಶಪಡಿಸಿಕೊಂಡನು. ನಂತರ ಗೋವಾ, ಉತ್ತರ ಕೊಂಕಣ ಇತರ ಪ್ರಾಂತ್ಯಗಳನ್ನು ಕಳೆದುಕೊಂಡನು. ಇದು ಪ್ರಮುಖ ಲಾಭದಾಯಕ ವ್ಯಾಪಾರ ವಹಿವಾಟು, ಸೇನಾಬಲ ಹೊಂದಿದ ಪ್ರಾಂತ್ಯವಾಗಿದ್ದರಿಂದಾಗಿ ಇದು ವಿಜಯನಗರದ ಮೇಲೆ ಸಾಕಷ್ಟು ಪೆಟ್ಟು ನೀಡಿತ್ತು. ಜೊತೆಗೆ ಈತನ ಕಾಲದಲ್ಲಿ ಅನೇಕ ದಂಗೆಗಳು ಸಂಭವಿಸಿದವು. ಇವನಿಗೆ ಜನರ ಬೆಂಬಲವಾಗಲಿ ಅಥವಾ ಅಧಿಕಾರದ ಬೆಂಬಲವಾಗಲಿ ಇರದೇ ಬೇಸತ್ತ ಮಗನಿಂದಲೇ ಕೊಲೆಯಾದನು. ಒಟ್ಟಿನಲ್ಲಿ ೨೯.೦೧.೧೪೪೫ ಹಾಗೂ ೦೧.೧೧.೧೪೮೬ರ ನಡುವೆ ವಿರೂಪಾಕ್ಷ ಮತ್ತು ಪ್ರೌಢದೇವರಾಯನನ್ನು ಪತನಗೊಳಿಸಲಾಯಿತೆಂದು ತಿಳಿದುಬರುತ್ತದೆ.[೧೭]

ಸಾಳುವರ ಆಡಳಿತಾವಧಿಯೂ ಅಲ್ಪಾವಧಿಯಾಗಿದೆ. ಇವರು ಮಂಗಳಗಿರಿಯಿಂದ ವಲಸೆ ಬಂದು ಮಂಗು ಎಂಬುವವನು, ಸಂಗಮ ವಂಶದ ೨ನೆಯ ಕಂಪಣನಿಗೆ ನೆರವು ನೀಡಿದನು. ಇವರ ಪೂರ್ವಿಕರು ಕಲ್ಯಾಣಿಯಲ್ಲಿ ಆಳುತ್ತಿದ್ದರು.[೧೮] ತಾವು ಯಾದುವನಿಂದ ಬಂದವರೆಂದೂ ಸೂರ್ಯ ವಂಶಕರ ಕುಲಕ್ಕೆ ಸೇರಿದವರೆಂದು ಹೇಳಿಕೊಂಡರು. ಅಲ್ಲದೇ ಸಂಗಮ ವಂಶದ ೨ನೆಯ ದೇವರಾಯನ ತಂಗಿಯಾದ ಹರಿಮಾಳಳನ್ನು ಸಾಳ್ವವಂಶದ ತಿಮ್ಮನು ಮದುವೆಯಾಗಿದ್ದರಿಂದಾಗಿ ಇವರು ಸಂಗಮ ವಂಶದೊಂದಿಗೆ ರಕ್ತಸಂಬಂಧವನ್ನು ಹೊಂದಿದ್ದರು. ಈ ವಂಶದಲ್ಲಿ ಕ್ರಿ.ಶ. ೧೪೫೨ರಲ್ಲಿ ನರಸಿಂಹನಿಂದ ರಾಜಕೀಯ ಪ್ರಾರಂಭವಾಯಿತು. ಈತನು ಆಂಧ್ರ ಪ್ರದೇಶದ ಚಿತ್ತೂರು ಜಿಲ್ಲೆ ಮತ್ತು ತಮಿಳುನಾಡಿನಲ್ಲಿ ಎರಡು ಆರ್ಕಾಟ್ ಜಿಲ್ಲೆಗಳನ್ನು, ಕರ್ನಾಟಕದಲ್ಲಿ ಕೋಲಾರ ಜಿಲ್ಲೆಯನ್ನು ಪ್ರಾರಂಭದಲ್ಲಿ ಅಂದರೆ ವಿರೂಪಾಕ್ಷನ

ಆಳ್ವಿಕೆಯಲ್ಲಿ ತನ್ನ ಹತೋಟಿಗೆ ತೆಗೆದುಕೊಂಡನು. ಆಂಧ್ರಪ್ರದೇಶದ ಕರಾವಳಿ, ಉದಯಗಿರಿ ಕೋಟೆ, ಚೋಳದೇಶ, ತೊಂಡೈಮಂಡಲ ದೇಶಗಳನ್ನು ಸಹ ಗೆದ್ದುಕೊಂಡನು. ರಾಮೇಶ್ವರ, ಶ್ರೀಲಂಕಾದವರೆಗೂ ಕಪ್ಪಕಾಣಿಕೆಯನ್ನು ಪಡೆಯಲಾರಂಭಿಸಿದನು. ಕ್ರಿ.ಶ. ೧೪೭೧ರಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಿದನು. ಈತನು ರಾಜನಾದ ಬಗೆ ನಿಖರವಾದ ಕಾಲಾವಧಿ ಇಲ್ಲ.[೧೯] ಇಮ್ಮಡಿ ನರಸಿಂಹನ ಇಬ್ಬರು ಮಕ್ಕಳಲ್ಲಿ ಹಿರಿಯ ಮಗನಾದ ತಿಮ್ಮಭೂಪನನ್ನು ಮೊದಲು ರಾಜನನ್ನಾಗಿ ಮಾಡಿದನು. ಈತನ ಕೊಲೆಯಾಯಿತು. ನಂತರ ಕಿರಿಯ ಮಗ ಇಮ್ಮಡಿ ನರಸಿಂಹನನ್ನು ಪಟ್ಟಾಭಿಷೇಕ ಮಾಡಿದನು. ಆದರೆ ಆಡಳಿತವೆಲ್ಲವೂ ತುಳುವ ನರಸನಾಯಕನ ಕೈಯಲ್ಲಿ ಕೇಂದ್ರೀಕೃತವಾಗಿತ್ತು. ಈ ಮೂಲಕ ತುಳುವ ವಂಶದ ಆಳ್ವಿಕೆಗೆ ಅವಕಾಶ ಮಾಡಿಕೊಟ್ಟಿತು.[೨೦]

ಈ ತುಳು ವಂಶದಲ್ಲಿ ಕೃಷ್ಣದೇವರಾಯ, ಅಚ್ಯುತರಾಯ ಪ್ರಮುಖ ಅರಸರಾಗಿದ್ದಾರೆ. ಇವರು ಕಲೆ, ಸಾಹಿತ್ಯ, ವಾಸ್ತುಶಿಲ್ಪ ಹೀಗೆ ಅನೇಕ ಕ್ಷೇತ್ರಗಳಲ್ಲಿ ಅಭಿವೃದ್ಧಿ ಪಡಿಸಿದರು. ಕ್ರಿ.ಶ. ೧೫೪೨ರಿಂದ ತುಳುವ ವಂಶದ ಆಳ್ವಿಕೆಯೂ ಅರವೀಡು ವಂಶದ ಆಳ್ವಿಕೆಗೆ ಒಳಪಟ್ಟಿತು. ಇಲ್ಲಿ ಅಳಿಯ ರಾಮರಾಯ, ತಿರುಮಲ ದೇವರಾಯ, ವೆಂಕಟ ಪತಿರಾಯರು ಮುಖ್ಯರಾಗಿದ್ದರು. (ಕ್ರಿ.ಶ. ೧೫೪೨ರಿಂದ ೧೬೪೬ರವರೆಗೆ ಒಟ್ಟು ೧೪೬ ವರ್ಷಗಳ ದೀರ್ಘ ಆಳ್ವಿಕೆ ನಡೆಸಿದರು. ಇಲ್ಲಿ ಆಂತರಿಕ ಕಲಹ ಹೆಚ್ಚಾಗಿ ವಿಜಯನಗರದ ಆಳ್ವಿಕೆಯ ಅವಸಾನದ ಹಾದಿ ಹಿಡಿಯಿತು.

ಒಟ್ಟಿನಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಅನ್ಯರ ದಾಳಿಯಿಂದ ತಡೆಗಟ್ಟಲು ಹಾಗೂ ೧೪ನೆಯ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ದುರ್ಬಲಗೊಂಡ ಸಾಮಂತ ದೊರೆಗಳನ್ನು ಬದಿಗೊತ್ತುವ ಉದ್ದೇಶವಿತ್ತು. ಹಾಗಾಗಿ ಸಂಗಮ ವಂಶದ ಸಹೋದರರಿಂದ ಸ್ಥಾಪನೆಗೊಂಡ ವಿಜಯನಗರ ಸಾಮ್ರಾಜ್ಯ ಒಟ್ಟು ೨೫೦ ವರ್ಷಗಳವರೆಗೆ ಭವ್ಯ ಸಂಸ್ಕೃತಿಯನ್ನು ಬೆಳಗಿಸಿದ ಕೀರ್ತಿಗೆ ಪಾತ್ರವಾಗಿದೆ.

### ೨.೨. ವಿಜಯನಗರ ಕಾಲದಲ್ಲಿ ಮಹಮದೀಯರ ಪಾತ್ರ :

ವಿಜಯನಗರ ಮತ್ತು ಮಹಮದೀಯರ ಅಥವಾ ಮುಸ್ಲಿಂ ಅರಸರ ಹೋರಾಟವು ಧಾರ್ಮಿಕಕ್ಕಿಂತ ಹೆಚ್ಚಾಗಿ ಅದು ರಾಜಕೀಯ ಸ್ವರೂಪವನ್ನು ಪಡೆದುಕೊಂಡಿತ್ತು. ವಿಜಯನಗರ ಅರಸರು ತಮ್ಮ ವ್ಯಾಪ್ತಿಯಲ್ಲಿ ಮುಸ್ಲಿಮರನ್ನು ಬದುಕಲು ಬಿಟ್ಟಿದ್ದರು. ಅಷ್ಟೇ ಅಲ್ಲ ತಮ್ಮ ಸೇವೆಯಲ್ಲಿ ಅವರಿಗೂ ಅವಕಾಶವನ್ನು ನೀಡಿದ್ದರು. ಮತ್ತು ಹಲವಾರು ವಿಧಗಳಲ್ಲಿ ಅವರಿಗೆ ಪ್ರೋತ್ಸಾಹವನ್ನು ಸಹ ನೀಡಿದ್ದರು. ಮೊದಲಿನಿಂದಲೂ ಮುಸ್ಲಿಮ್ ವ್ಯಾಪಾರಿಗಳು ಮತ್ತು ರಾಯಭಾರಿಗಳು ರಾಜಧಾನಿಯನ್ನು ಸಂದರ್ಶಿಸಿದರು. ಮತ್ತು ಹದಿನೈದನೆಯ ಶತಮಾನದ ನಂತರ ಮುಸ್ಲಿಮರು ದೊಡ್ಡ ಸಂಖ್ಯೆಯಲ್ಲಿ ರಾಜಧಾನಿಯಲ್ಲಿ ಸೇರಿಕೊಂಡಿದ್ದರು. (ಅದರಲ್ಲೂ ಮುಖ್ಯವಾಗಿ ಅಶ್ವದಳದಲ್ಲಿ) ಇದರ ಜೊತೆಗೆ ಮುಸ್ಲಿಮರು ಪರಿಣಿತ ಕೆಲಸಗಾರರಾಗಿಯೂ ಸೇವೆ ಸಲ್ಲಿಸಿದ ಸಾಧ್ಯತೆ ಇದೆ.[೨೧]

ಹದಿನಾಲ್ಕನೆಯ ಶತಮಾನದ ಮಧ್ಯಭಾಗದಿಂದ ಹದಿನೈದನೆಯ ಶತಮಾನದ ಕೊನೆಯವರೆಗೆ ಕುದುರೆ ವ್ಯಾಪಾರವು ಅರಬ್ ವ್ಯಾಪಾರಿಗಳ ಸಂಪೂರ್ಣ ಏಕಸ್ವಾಮ್ಯತ್ವದಲ್ಲಿತ್ತು. ವಿಜಯನಗರದ ಅರಸರು ತಮ್ಮ ಸೈನ್ಯದ ಕುದುರೆಗಳಿಗಾಗಿ ಈ ವ್ಯಾಪಾರಿಗಳನ್ನೇ ಬಹುಪಾಲು ಅವಲಂಬಿಸಿದ್ದರು. ಅರಬ್ ಕುದುರೆ ವ್ಯಾಪಾರಿಗಳ ಪ್ರಸ್ತುತಿಯು ಅನೇಕ ಶಿಲಾಶಾಸನ ಮತ್ತು ಶಿಲ್ಪಕಲೆಯಲ್ಲಿ ಕಂಡುಬಂದಿದೆ. ಹದಿನೈದನೆಯ ಶತಮಾನದ ಮೊದಲ ಬಾಗದ ರಾಮಚಂದ್ರ ದೇವಾಲಯದ ಹೊರ ಪ್ರಕಾರದ ಗೋಡೆಯು ಐದು (೫) ಸಾಲಿನ ಚಿತ್ರಗಳಲ್ಲಿ ಕೆಳಗಿನಿಂದ ಎರಡನೆಯ ಸಾಲು ಕುದುರೆ ಮೆರವಣಿಗೆಯನ್ನು ಸೂಚಿಸುತ್ತದೆ. ಈ ಮೆರವಣಿಗೆಯೂ ಅರಬ್‌ರ ನೇತೃತ್ವದಲ್ಲಿ ನಡೆಯುತ್ತದೆ. ಈ ವ್ಯಾಪಾರಿಗಳನ್ನು ಅವರ ಉದ್ದನೇಯ ನಿಲುವಂಗಿ ಗಡ್ಡ (Beards) ಮತ್ತು ತೊಪ್ಪಿಗೆ ಮೂಲಕ ಗುರುತಿಸಬಹುದಾಗಿದೆ. ಅಲ್ಲಲ್ಲಿ ಅರಬರು ಸಿಂಹಾಸನದ ಮೇಲೆ ಕುಳಿತು ರಾಜನಿಗೆ ಕುದುರೆಗಳನ್ನು ಅರ್ಪಿಸುವ ಚಿತ್ರಗಳನ್ನು ಸಹ ಕಾಣಬಹುದು.[೨೨] ಇದೇ ರೀತಿ ವಿದೇಶಿಯರಂತೆ ಕಂಡುಬರುವ ಹಲವಾರು ಜನರು ಚಿತ್ರಗಳನ್ನು ಮಹಾನವಮಿ ದಿಬ್ಬದ ಗೋಡೆ ಚಿತ್ರಗಳಲ್ಲೂ ಕಾಣಬಹುದು. ಕುದುರೆಗಳನ್ನು ಅರ್ಪಿಸುತ್ತಿರುವ ಅದರ ಮೇಲೆ ಸವಾರಿ ಮಾಡುತ್ತಿರುವ ಮತ್ತು ಕುದುರೆ, ಒಂಟೆಗಳನ್ನು ಹೊಡೆದುಕೊಂಡು ಹೋಗುವ ಚಿತ್ರಗಳು ತುಂಬಾ ಸಾಮಾನ್ಯ.

ದಕ್ಷಿಣದ ಮುಸ್ಲಿಮ್ ರಾಜಧಾನಿಗಳಿಂದ ಮತ್ತು ವಿದೇಶಗಳಿಂದಲೂ ಅನೇಕ ಮುಸ್ಲಿಮ್ ರಾಯಭಾರಿಗಳು ವಿಜಯನಗರವನ್ನು ಸಂದರ್ಶಿಸಿದ್ದಾರೆ. ವಿಜಯನಗರದಲ್ಲಿ ನೆಲೆಸಿದ್ದ 'ಖ್ವಾಜಾಮಸೂದ್ ಮತ್ತು ಖ್ವಾಜಾ ಮಹಮ್ಮದ್' ಎಂಬ ಖುರಾಸಾನ್ ದೇಶದವರನ್ನು ರಾಜನು ತನ್ನ ರಾಯಭಾರಿಗಳನ್ನಾಗಿ ೨ನೆಯ ದೇವರಾಯನು ನೇಮಿಸಿಕೊಂಡನು.[೨೨] ವಿದೇಶಿ ರಾಯಭಾರಿಗಳಲ್ಲೂ ಅತ್ಯಂತ ಪ್ರಮುಖನಾದವನು ಅಬ್ದುಲ್ ರಾಜಕನು. ಇವನು ೨ನೆಯ ದೇವರಾಯನಿಂದ ಆಕರ್ಷಿಸಲ್ಪಟ್ಟು ಪರ್ಶಿಯಾದ ರಾಯಭಾರಿಯಾದ ಇವನು ೨ನೆಯ ದೇವರಾಯನ ಆಸ್ಥಾನದ ಮತ್ತು ರಾಜಧಾನಿ ವರ್ಣನೆಗಳನ್ನು ತನ್ನ ಪ್ರವಾಸಿ ಕಥನದಲ್ಲಿ ದಾಖಲಿಸಿದ್ದಾನೆ. ಹದಿನಾಲ್ಕನೆಯ ಶತಮಾನದ ಕೊನೆ ಭಾಗದಲ್ಲಿ ಮಹಾನವಮಿ ದಿಬ್ಬದ ಮೇಲೆ ಮುಸ್ಲಿಮ್ ರಾಯಭಾರಿಗಳು ಅಥವಾ ಪ್ರವಾಸಿಗರು ಅರಸನಿಗೆ ಗೌರ ವಂದನೆ ಸಲ್ಲಿಸಿರುವುದನ್ನು ಕೆತ್ತಲಾಗಿದೆ.

ಅಬ್ದುಲ್ ರಜಾಕನು ಪ್ರೌಢದೇವರಾಯನನ್ನು ಈ ರೀತಿ ಹೊಗಳಿದ್ದಾನೆ. "ಪ್ರೌಢ ದೇವರಾಯನು ಉನ್ನತ ಗೆಳೆಯ ಇವನಂತಹ ಚಕ್ರವರ್ತಿ ಭಾರತದಲ್ಲಿ ದೊರೆಯುವುದು ಅತೀ ವಿರಳ ಎಂದು ತನ್ನ ಉದ್ಗಾರವಾಚಕವನ್ನು ಹೇಳಿದ್ದಾನೆ.

"ವಿಜಯನಗರದಂತಹ ಪಟ್ಟಣ ಇನ್ನೊಂದಿಲ್ಲ ತನ್ನ ಕಿವಿ, ಅಲ್ಲಿಯವರೆಗೂ ಇಂತಹ ಇನ್ನೊಂದು ಪಟ್ಟಣ ಜಗತ್ತಿನಲ್ಲಿ ಇದೆಯೆಂಬುದನ್ನು ಕೇಳಿರಲಿಲ್ಲವಂತೆ. ಅಲ್ಲಿ ವಿಶಾಲ ಬೀದಿಗಳಿದ್ದು, ಸಾಕಷ್ಟು ಗುಲಾಬಿಗಳನ್ನು ಮಾರುತ್ತಿದ್ದಾರಂತೆ. ಜನರು ಗುಲಾಬಿ ಹೂವಿಲ್ಲದೆ ಇರುತ್ತಿರಲಿಲ್ಲವಂತೆ. ಮುತ್ತು, ರತ್ನ,

ಮಾಣಿಕ್ಯಗಳನ್ನು ವ್ಯಾಪಾರಿಗಳು ಯಾವುದೇ ಭಯ ಭೀತಿ ಇಲ್ಲದೇ ಪೇಟೆಯಲ್ಲಿ ಮಾರುತ್ತಿದ್ದರಂತೆ.'' ಈ ವಿವರಗಳು ದೇವರಾಯನ ಕಾಲದ ವೈಭವವನ್ನು ಸೂಚಿಸುತ್ತವೆ. ಹೀಗೆ ಅಬ್ದುಲ್ ರಜಾಕ್ ವರ್ಣಿಸಿದ್ದಾನೆ.

ಹೀಗೆ ಮೊದಲಿನಿಂದಲೂ ಮುಸ್ಲಿಮರು ವಿಜಯನಗರ ಸಾಮ್ರಾಜ್ಯವನ್ನು ಮತ್ತು ಅದರ ರಾಜಧಾನಿಯನ್ನು ಸಂದರ್ಶಿಸಿದ್ದಾರೆ. ಆದರೆ ಇಸ್ಲಾಂ ಧರ್ಮದ ಅಲ್ಪ ಪ್ರಭಾವ ವಿಜಯನಗರದ ಮೇಲೆ ಕಂಡುಬಂದಿದ್ದು ಹದಿನೈದನೆಯ ಶತಮಾನದಲ್ಲಿ, ಆಗ ಮುಸ್ಲಿಮ್ ಜನರು ದೊಡ್ಡ ಸಂಖ್ಯೆಯಲ್ಲಿ ರಾಜ್ಯದ ಸೇವೆಗೆ ನಿಯೋಜನಗೊಂಡರು.

ವಿಜಯನಗರ ಸೇವೆಯಲ್ಲಿ ಮುಸ್ಲಿಮ್ ಕಂಡುಬಂದದ್ದು ಒಂದನೆಯ ದೇವಾರಾಯನ ಕಾಲದಲ್ಲಿ. ಅತ್ಯಂತ ಮೊಟ್ಟಮೊದಲ ಉದಾಹರಣೆಯಾಗಿದೆ. ಅದರ ಪ್ರಕಾರ (ಕೈಫಿಯತ್, ಪಾನೇಮ್ ಪಾಳೆಪಟ್ಟು) ಪಾನೆಮ್‌ಕೋಟೆಯನ್ನು 'ಸಾಬತ್ ಮುಲ್ಕ' ಎಂಬಾತನು ವಶಕ್ಕೆ ನೀಡಲಾಯಿತು. ನಂತರ ಈ ಕೋಟೆಯು ಸಾಳುವ ವಂಶದ ಅವಧಿಯವರೆಗೂ ಮುಸ್ಲಿಂ ಅಧಿಕಾರಿಗಳ ಕೈಯಲ್ಲಿತ್ತು. ಆದರೂ ಎರಡನೆಯ ದೇವರಾಯನ ಕಾಲದಿಂದ ಮುಸ್ಲಿಮರು ದೊಡ್ಡ ಸಂಖ್ಯೆಯಲ್ಲಿ ವಿಜಯನಗರದ ಸೈನ್ಯದಲ್ಲಿ ನಿಯೋಜನೆಗೊಂಡಿದ್ದರು.[೨೩]

ವಿದೇಶಿ ಪ್ರವಾಸಿ ಫೆರಿಸ್ತಾ ಪ್ರಕಾರ ೨ನೆಯ ದೇವಾರಾಯ ಬಹಮನಿ ಅರಸರ ವಿಜಯಕ್ಕೆ ಅವರ ಅಶ್ವದಳ ಮತ್ತು ಬಿಲ್ಲುಗಾರರ ಪಡೆಯೇ ಕಾರಣ ಎಂದು ಮತ್ತು ತನ್ನ ಸೈನ್ಯವನ್ನು ಬಲಿಷ್ಠಗೊಳಿಸಲು ಮುಸ್ಲಿಮರನ್ನು ತನ್ನ ಸೈನ್ಯಕ್ಕೆ ಸೇರಿಸಿಕೊಳ್ಳುವಂತೆ ಆಜ್ಞೆ ಮಾಡಿದನು. ಮತ್ತು ಅಂಥ ಸೈನಿಕರಿಗಾಗಿ ಸ್ಥಳವನ್ನು ಮತ್ತು ಬೀಜನಗ್ಗುರ ಎಂಬ ನಗರದಲ್ಲಿ ಒಂದು ಮಸೀದಿಯನ್ನು ಕಟ್ಟಿಸಿಕೊಟ್ಟನು. ಅಷ್ಟೇ ಅಲ್ಲಾ ಅವರ ಧರ್ಮಾಚರಣೆಗೆ ಯಾರು ಅಡ್ಡಿಪಡಿಸಬಾರದೆಂದು ಮತ್ತು ಅದಕ್ಕೂ ಮಿಗಿಲಾಗಿ ಕುರಾನಿನ ಒಂದು ಪ್ರತಿಯನ್ನು ತನ್ನ ಸಿಂಹಾಸನದ ಎದುರಿನಲ್ಲಿ ಉನ್ನತ ಆಸನದಲ್ಲಿಡಬೇಕೆಂದು ಹೇಳಿದನು.[೨೪]

ಮುಂದೆ ಎರಡನೆಯ ದೇವರಾಯ ನಂತರ ಸುಮಾರು ಒಂದೂವರೆ ಶತಮಾನದ ನಂತರ ಫೆರಿಸ್ತಾ ಬರೆದ ದಾಖಲೆಗಳಲ್ಲಿ ಸಹ ಈ ವಿಷಯ ಉಲ್ಲೇಖಿಗೊಂಡಿದೆ. ಒಂದು ವೇಳೆ ಪ್ರಾಚ್ಯವಸ್ತು ಸ್ಥಳಕ್ಕೆ ಸಂಬಂಧಿಸಿದ ಕುರುಹುಗಳು ಕಾಣಸಿಗದಿದ್ದರೆ ಫೆರಿಸ್ತಾನ ಹೇಳಿಕೆಗೆ ಮಹತ್ವ ಇರುತ್ತಿರಲಿಲ್ಲ. ಎರಡನೆಯ ದೇವರಾಯನು ಹೊರಡಿಸಿದ ಒಂದು ತಾಮ್ರಫಲಕ ಶಾಸನದಲ್ಲಿ ''ಸುಮಾರು ಹತ್ತು ಸಾವಿರ ತುರುಷಕ್ (Turushak) ಕುದುರೆ ಸವಾರರು ತನ್ನ ಸೇವೆಯಲ್ಲಿದ್ದರು'' ಎಂದು ಉಲ್ಲೇಖಿಸಲಾಗಿದೆ.

ರಾಜನ ಅಧಿಕಾರಿಯಾದ ಅಹಮದ ಖಾನ್ ಎಂಬುವವನು ರಾಜಧಾನಿಯಲ್ಲಿಯೇ ಕ್ರಿ.ಶ. ೧೪೩೯ರಲ್ಲಿ ಒಂದು ಮಸೀದಿಯನ್ನು ನಿರ್ಮಿಸಿದನು[೨೫] ಎಂಬುದು ತಿಳಿದುಬರುತ್ತದೆ. ಅಲ್ಲಿ ಕನಿಷ್ಟ ಮೂರು ಗೋರಿಗಳು ಕಂಡುಬಂದಿದ್ದು ಅವುಗಳ ಕಾಲವನ್ನು ಹದಿನೈದನೆಯ ಶತಮಾನದ ಮೊದಲ ಭಾಗ

ಎಂದು ಗುರುತಿಸಬಹುದು. ಒಂದು ಗೋರಿ ಮಸೀದಿಯ ಹತ್ತಿರವಿದ್ದರೆ, ಇನ್ನೆರಡು ಕಡ್ಡಿರಾಮಪುರದಲ್ಲಿ ಕಂಡುಬಂದಿವೆ.[೨೬] ನಂತರ ಬಂದ ಎಲ್ಲಾ ದೊರೆಗಳು ಮುಸ್ಲಿಮರನ್ನು ಸೇವೆಗೆ ನಿಯೋಜಿಸಿಕೊಳ್ಳುವ ಸಂಪ್ರದಾಯವನ್ನು ಹೆಚ್ಚು ಕಡಿಮೆ ಮುಂದುವರಿಸಿದರು. ಹೀಗೆ ಸಾಳುವ ನರಸಿಂಹನ ಕಾಲದಲ್ಲಿಅನೇಕ ಮುಸ್ಲಿಮರು ಉನ್ನತ ಹುದ್ದೆಗಳನ್ನು ಅನುಭವಿಸಿದರು. ಈತನು ಮುಸ್ಲಿಮ್ ಸಮುದಾಯಕ್ಕೆ ಅನೇಕ ಸಹಾಯ ಮಾಡಿದನು. ಪೆನುಗೊಂಡದಲ್ಲಿ ಬಾಬಯ್ಯ ಎಂಬ ಮುಸ್ಲಿಮ್ ಸಂತನ ದರ್ಗಾಕ್ಕೆ ಒಂದು ಹಳ್ಳಿಯನ್ನೇ ಉಂಬಳಿಯನ್ನಾಗಿ ಬಿಟ್ಟುಕೊಟ್ಟನು. ಕೃಷ್ಣದೇವರಾಯನ ಆಡಳಿತದ ಕಾಲದಲ್ಲಿ ಮುಸ್ಲಿಮರು ಸೇವೆಯಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸಿದ್ದರು. ಡೋಮಿಂಗೋ ಪಾಯಸ್‌ನ ಪ್ರಕಾರ ಕೃಷ್ಣದೇವರಾಯ ಸೈನ್ಯದಲ್ಲಿನ ಮುಸ್ಲಿಮರು ಬೆಂಕಿ ಉಗುಳುವ (ಸಿಡಿಮದ್ದು) ಮತ್ತು ಕ್ಷಿಪಣಿ (ಫಿರಂಗಿ) ಹೊಡೆಯುವುದರಲ್ಲಿ ಪರಿಣತಿಯನ್ನು ಹೊಂದಿದ್ದರು. ನ್ಯೂನಿಜ್‌ನು ಕೃಷ್ಣದೇವರಾಯನ ರಾಯಭಾರಿನ ದಾಳಿಯನ್ನು ವಿವರಿಸುತ್ತಾ ಆತನ ಯಶಸ್ಸಿಗೆ ಹೇಗೆ ಮುಸ್ಲಿಮರು ಕಾರಣೀಭೂತರಾದರು ಎಂಬುದನ್ನು ಹೇಳುತ್ತಾನೆ.

ಫೆರಿಸ್ತಾನ ಹೇಳಿಕೆಯನ್ನು ಗಮನಿಸಿದಾಗ ಬಿಜಾಪುರದ ಇಬ್ರಾಹಿಂ ಆದಿಲ್‌ಶಾಹಿ ವಜಾಗೊಳಿಸಿದ ಸುಮಾರು ಮೂರು ಸಾವಿರ ಮುಸ್ಲಿಮರು ಸೈನಿಕರನ್ನು ವಿಜಯನಗರದ ರಾಮರಾಯನು ತನ್ನ ಸೇವೆಯಲ್ಲಿ ಸೇರಿಸಿಕೊಂಡನು. ಅವರಲ್ಲಿ ಅತ್ಯಂತ ಉನ್ನತ ಹುದ್ದೆಯನ್ನು ಅಲಂಕರಿಸಿದ್ದವರು ದಿಲಾವಾರ್‌ಖಾನ್, ಅಂಬುರ್‌ಖಾನ್, ನೂರ್‌ಖಾನ್ ಮತ್ತು ಬಿಜಲಿಖಾನ್ ಇವರಲ್ಲದೇ ಮತ್ತೊಬ್ಬ ಐನ್-ಉಲ್-ಮುಲ್ಕಿ ಗಿಲಾನಿ ತನ್ನ ಶೂರತನದಿಂದ ಬೇರೆಯವರಿಗಿಂತ ತುಂಬಾ ಶ್ರೇಷ್ಠನಾಗಿದ್ದ. ಆತನ ಶೌರ್ಯಕ್ಕೆ ಮೆಚ್ಚಿ ರಾಮರಾಯನು ಆತನನ್ನು ತನ್ನ ಸಹೋದರ ಎಂದು ಸಂಭೋದಿಸುತ್ತಿದ್ದ. ರಾಮರಾಯನು ತನ್ನ ರಾಜ್ಯದಲ್ಲಿ ಮುಸ್ಲಿಮರಿಗೆ ಮುಕ್ತ ಅವಕಾಶವನ್ನು ನೀಡಿದ್ದನು. ಅವರು ತಮ್ಮ ಎಲ್ಲಾ ಸಂಪ್ರದಾಯಗಳನ್ನು ಪಾಲಿಸಬಹುದಾಗಿತ್ತು.[೨೭] ಅವರು ಗೋವುಗಳನ್ನು ಸಹ ಕೊಲ್ಲಬಹುದಾಗಿತ್ತು. ಆಗ ಬ್ರಾಹ್ಮಣರು ಮತ್ತು ಹಿಂದೂ ಕುಲೀನರು ಏನನ್ನು ಹೇಳುವಂತಿರಲಿಲ್ಲ. ಮುಸ್ಲಿಮರು ಬೇರೆ ಯಾರಿಗೂ ಸಲಾಮು ಸಲ್ಲಿಸುತ್ತಿದ್ದೇವೆ ಎಂಬ ಪಾಪಪ್ರಜ್ಞೆ ಕೊಡದೆ ಇರಲು ರಾಮರಾಯನು ತನ್ನ ಸಿಂಹಾಸನದ ಪಕ್ಕದಲ್ಲಿ ಕುರಾನ್ ಇರಿಸಿದ್ದನು. ಇದನ್ನೇ ಎರಡನೆಯ ದೇವರಾಯನು ಸಹ ಮಾಡಿದ್ದನು. ರಕ್ಕಸ-ತಂಗಡಗಿ ಯುದ್ಧ ನಡೆದಾಗ ವಿಜಯನಗರ ಸೈನ್ಯ ಅಪಾರ ಸಂಖ್ಯೆಯಲ್ಲಿ ಮುಸ್ಲಿಮರಿಂದ ಕೂಡಿತ್ತು. ಅದರಲ್ಲೂ ಇಬ್ಬರು ಮುಸ್ಲಿಮ್ ದಂಡನಾಯಕರ ಮೋಸ ಮತ್ತು ವಂಚನೀಯ ಫಲವಾಗಿ ವಿಜಯನಗರದ ಸೈನ್ಯವು ನಾಶವಾಗಿ ಹೋಯಿತು.

ಈ ರೀತಿಯಾಗಿ ಹದಿನೈದನೆಯ ಶತಮಾನದ ಆರಂಭದಲ್ಲಿ ಮುಸ್ಲಿಮರ ಜನಸಂಖ್ಯೆ ವಿಜಯನಗರದಲ್ಲಿ ಗಣನೀಯವಾಗಿ ಬೆಳೆದಿತ್ತು. ನಗರದ ಉತ್ತರದ ಗುಡ್ಡಗಳ ಸಾಲಿನಿಂದ ಮಾಲ್ಯವಂತ ಬೆಟ್ಟಗಳವರೆಗೆ ಮುಸ್ಲಿಮರ ಜನವಸತಿ ಅಧಿಕವಾಗಿತ್ತು. ಆ ಭಾಗದಲ್ಲಿ ಕಂಡುಬಂದಿರುವ ಮಸೀದಿಗಳು, ಗೋರಿಗಳು ಮತ್ತು ಮುಸ್ಲಿಮ್ ಸ್ಮಶಾನಗಳ ನೆರವಿನಿಂದ ಇದನ್ನು ದೃಢಪಡಿಸಬಹುದು. ಆ ಕಾಲದ ಸಮಕಾಲೀನ

ಬರಹಗಾರರಾದ ಶಿರಾಝೀ ಹೇಳಿರುವಂತೆ ತುರ್ಕವಾಡದಲ್ಲಿ ಮುಸ್ಲಿಮರು ನೆಲಿಸಿದ್ದರು. ಒಂದು ಮಸೀದಿಯಿತ್ತು. ಮತ್ತು ತಮ್ಮ ಸಂಪ್ರದಾಯಗಳನ್ನು ಪಾಲಿಸುತ್ತಿದ್ದರು. ಪೋರ್ಚುಗಲಿನ ಪ್ರವಾಸಿ ಪೇಸ ಹೇಳಿರುವಂತೆ ಈ ರಸ್ತೆಯ ಕೊನೆ ಭಾಗದಲ್ಲಿ ಮೂರಿಷ್‌ರ ನೆಲೆ ಇದೆ. ಅದು ನಗರದ ಅತ್ಯಂತ ಕೊನೆಗೂ ಇದೆ. ಈ ಮೂರಷ್ (Morish) ನೆಲೆಯಲ್ಲಿ ವಾಸಿಸುವ ಕೆಲವು ಜನರು ಇದೇ ದೇಶದ ನಿವಾಸಿಗಳು. ಅವರಿಗೆ ರಾಜನು ಸಂಬಳ ಕೊಡುತ್ತಾನೆ. ಮತ್ತು ಅವರು ಆತನ ಕಾವಲು ಪಡೆಯಲ್ಲಿ ಸೇವೆ ಸಲ್ಲಿಸುತ್ತಾರೆ. ಈ ವಿವರಣೆ ನಗರದ ಪೂರ್ವದ ಕೊನೆಯಲ್ಲಿದ್ದ ಮುಸ್ಲಿಮ್ ನೆಲೆಗೆ ಹೊಂದಿಕೆಯಾಗುತ್ತದೆ. ಮತ್ತು ರಸ್ತೆಯು ಅರಮನೆಯ ರಸ್ತೆಯನ್ನು ಸಂಧಿಸುತ್ತದೆ. ಹದಿನಾರನೆಯ ಶತಮಾನದ ಶಾಸನಗಳು ಸಹ ಗೋರಿಯು ಕೆಳಭಾಗದ ಹಳ್ಳಿಗಳು (ಗೋರಿ ಕೆಳಗಿನ ಗ್ರಾಮ) ಗುರುತಿಸಿದೆ. ಇದು ಈ ಭಾಗದಲ್ಲಿ ಮುಸ್ಲಿಮರು ವಾಸಿಸುತ್ತಿದ್ದರು ಎಂಬುದನ್ನು ತಿಳಿಸುತ್ತದೆ.[೨೮] ಕಮಲಾಪುರದಿಂದ ಕಂಪಲಿಗೆ ಹೋಗುವ ರಸ್ತೆಯ ಎಡ ಭಾಗದಲ್ಲಿ ಮುಸ್ಲಿಮರ ಇನ್ನೊಂದು ನೆಲೆ ಇದೆ. ಈ ನೆಲೆ ಕಮಲಾಪುರ ಗ್ರಾಮದ ಹತ್ತಿರ ಇತ್ತು. ಇಲ್ಲಿ ವಿಜಯನಗರ ಕಾಲದ ಒಂದು ಸ್ಮಶಾನ ದೊರೆತಿದೆ. ಈಗ ಅದರಲ್ಲಿ ಕೆಲವು ಇತ್ತೀಚಿನ ಗೋರಿಗಳು ಒಂದು ದರ್ಗಾ ಮತ್ತು ಈದ್ಗಾ ಕೂಡಾ ದೊರೆತಿದೆ. ನಗರದ ಪಶ್ಚಿಮಕ್ಕೆ ಕಡ್ಡಿರಾಮಪುರವು ಉಪನಗರವಾಗಿತ್ತು. ಈ ಹಳ್ಳಿಯ ವಾಯವ್ಯಕ್ಕೆ ಇನ್ನೂ ಎರಡು ಗೋರಿಗಳಿವೆ. ಅದರ ಸುತ್ತಲೂ ಸ್ಮಶಾನವಿದೆ. ಇಲ್ಲಿಯೂ ಕೂಡ ಮುಸ್ಲಿಮರ ಜನವಸತಿ ಇದ್ದಿರಲೇಬೇಕು.

ಮುಸ್ಲಿಮರ ಇರುವಿಕೆ ಮತ್ತು ಧಾರ್ಮಿಕ ಚಟುವಟಿಕೆಗಳ ಬಗ್ಗೆ ಮಾಹಿತಿ ನೀಡಲು ಇರುವ ಅತ್ಯಂತ ಪ್ರಮುಖ ಆಧಾರ ಎಂದರೆ ಇಲ್ಲಿ ದೊರೆತ ಮುಸ್ಲಿಮರ ಧಾರ್ಮಿಕ ಸ್ಮಾರಕಗಳು ಇಲ್ಲಿ ದೊರೆತ ಎರಡು ವಿಧದ ಸ್ಮಾರಕಗಳನ್ನು ಸರಿಯಾಗಿ ಬೇರ್ಪಡಿಸಬೇಕು. ಆ ಎರಡು ವಿಧಗಳು ಇಸ್ಲಾಂ ಶಿಲ್ಪಕಲೆಯನ್ನು ಹೋಲುತ್ತದೆ. ಮೊದಲನೆಯ ವಿಧದ ಮಸೀದಿಗಳು, ಗೋರಿಗಳು ಮತ್ತು ಸ್ಮಶಾನದ ಕಲ್ಲುಗಳು, ಇವು ಪ್ರಭಾವಿ ಮತ್ತು ಶ್ರೀಮಂತರ ಮುಸ್ಲಿಮರ ನೆರವಿನಿಂದ ನಿರ್ಮಿಸಲ್ಪಟ್ಟವು. ಎರಡನೆಯ ವಿಧದ ಸ್ಮಾರಕಗಳು ನೇರವಾಗಿ ಹಿಂದು ಆಸ್ಥಾನಕ್ಕೆ ಸಂಬಂಧಿಸಿದವುಗಳು ಮತ್ತು ಇವು ರಾಜಧಾನಿಯಲ್ಲಿಯೇ ಕಂಡುಬರುತ್ತವೆ. ಇವು ಹಲವಾರು ಇಸ್ಲಾಂ ಲಕ್ಷಣಗಳು ಹೊಸತನದೊಂದಿಗೆ ಕಾಣಿಸಿಕೊಂಡಿವೆ. ಕಾರಂಜಿಗಳು, ಸ್ನಾನಗೃಹಗಳು, ಕಾವಲುಗೋಪುರ, ವೀಕ್ಷಣಾಗೋಪುರ, ಕುದುರೆಲಾಳ, ಉಗ್ರಾಣ, ಸ್ವಾಗತ ಭವನ, ವಿಶ್ರಾಂತಿ ಕೋಣೆಗಳು ಮೊದಲಾದವು. ಮೊದಲನೆ ಪ್ರಕಾರದ ಸ್ಮಾರಕಗಳು ಜನರ ಜನಜೀವನ, ಧಾರ್ಮಿಕ ಜೀವನದೊಂದಿಗೆ ತಳಕು ಹಾಕಿಕೊಂಡಿವೆ.[೨೯]

ನಗರದಲ್ಲಿ ಎರಡು ಪ್ರಮುಖ ಮಸೀದಿಗಳನ್ನು ಗುರುತಿಸಲಾಗಿದೆ. ಅದರಲ್ಲಿ ಮೊದಲನೆಯದು ಅಹಮದ್‌ಖಾನ್‌ನ 'ಧರ್ಮಶಾಲೆ' ಇದು ಆಯತಾಕಾರದ ಯೋಜನೆ, ಪೂರ್ವಕ್ಕೆ ತೆರೆದುಕೊಂಡಿರುವ ಚಪ್ಪಟೆಯಾಕಾರದ ಮೇಲ್ಛಾವಣಿಯನ್ನು ಹೊಂದಿರುವ ಘನ ಕಂಬಗಳನ್ನು ಮೂರು ಕಡೆ ಹೊಂದಿರುವ ಕಟ್ಟಡ. ಕಲ್ಯಾಣಿಯ ಚಾಲುಕ್ಯರ ಕಂಬಗಳ ಮಾದರಿಯಲ್ಲಿ ಈ ಧರ್ಮಶಾಲೆ ಕಟ್ಟಡವು ಹದಿನಾರು

ಕಂಬಗಳನ್ನು ಹೊಂದಿದೆ. ಈ ಕಟ್ಟಡದ ವಾಸ್ತುಶಿಲ್ಪವನ್ನು ಗಮನಿಸಿದಾಗ ಅದು ಸಂಪೂರ್ಣವಾಗಿ ಇಸ್ಲಾಮಿಕ್ ಲಕ್ಷಣಗಳಿಂದ ಹೊರತಾಗಿದೆ. ಇಸ್ಲಾಮಿಕ್ ಲಕ್ಷಣವನ್ನು ಕಾಣಬಹುದಾದ ಏಕೈಕ ಸಾಧ್ಯತೆ ಎಂದರೆ ಮಿರಬ್ ನಿಚ್ಚೆ (Mirab Niche) ಅಥವಾ ಪ್ರಾರ್ಥನಾ ಕಮಾನು. ಇದನ್ನು ಪಶ್ಚಿಮ ಗೋಡೆಯ ಮಧ್ಯದಲ್ಲಿ ನಿರ್ಮಿಸಲಾಗಿದೆ. ಈ ಕಟ್ಟಡದ ಹತ್ತಿರದಲ್ಲೇ ಒಂದು ಬಾವಿ ಇದೆ. ಇದು ಮುಸ್ಲಿಮ್ ಮಸೀದಿಗಳಿಗೆ ಅವಶ್ಯಕವಾದದು. ಈ ಎರಡನ್ನು ಗಮನಿಸಿದಾಗ ಇದನ್ನು ನಿಸ್ಸಂದೇಹವಾಗಿ ಮಸೀದಿ ಎಂದು ಹೇಳಬಹುದು. ಅಲ್ಲಿ ದೊರೆತ ಕನ್ನಡ ಶಾಸನದಲ್ಲಿ 'ಧರ್ಮಶಾಲೆ' ಎಂದು ಇದನ್ನು ಗುರುತಿಸಿದ್ದರೂ ಇದು ಸ್ಥಳೀಯ ಭಾಷೆಯಲ್ಲಿ 'ಮಸೀದಿ' ಎಂಬ ಅರ್ಥವನ್ನು ಕೊಡುತ್ತದೆ.

ಎರಡನೆಯ ಮಸೀದಿ ಎಂದರೆ ಅಹಮದ್‌ಖಾನ್‌ನ ಮಸೀದಿಯಿಂದ ವಾಯವ್ಯದಲ್ಲಿ ಸುಮಾರು ಅರ್ಧ ಕಿ.ಮೀ. ದೂರದಲ್ಲಿ ಮಾಲ್ಯವಂತ ಬೆಟ್ಟದ ಕೆಳಭಾಗಕ್ಕೆ ಹತ್ತಿರದಲ್ಲಿರುವ ಕಟ್ಟಡ. ಈ ಮಸೀದಿಯ ಸುತ್ತ ಸ್ಮಶಾನ ಮತ್ತು ಒಂದು ಕಲ್ಲುಗಳನ್ನು ಜೋಡಿಸಿದ ಬಾವಿ ಇದೆ. ಈ ಕಟ್ಟಡವು ಈಗ ಶಿಥಿಲಾವಸ್ಥೆಯಲ್ಲಿದೆ. ಈ ಕಟ್ಟಡದ ವಿಶೇಷ ಎಂದರೆ ಪಶ್ಚಿಮ ಗೋಡೆಯಲ್ಲಿ ಕೆತ್ತಲಾದ ಕಮಾನು, ಈ ಮಸೀದಿಯು ಬಹಳಷ್ಟು ಬರಹ ಮತ್ತು ವಿಜಯನಗರದ ನಕಾಶೆಯಲ್ಲಿ. ಈ ಮಸೀದಿಯನ್ನು ಗುರುತಿಸಲಾಗಿಲ್ಲ. ಆದರೂ ಭಾರತೀಯ ಪ್ರಾಚ್ಯವಸ್ತು ಸರ್ವೆ (ASI) ಅವರು ಪ್ರಕಟಿಸಿದ ಒಂದು ಹಳೆಯ ನಕಾಶೆಯಲ್ಲಿ ಇದನ್ನು ಗುರುತಿಸಲಾಗಿದೆ. ಹೀಗೆ ಕನಿಷ್ಟ ಎರಡು ಮಸೀದಿಗಳನ್ನು ಗುರುತಿಸಬಹುದು ಉಳಿದವು ನಾಶ ಹೊಂದಿವೆ.

ಅಷ್ಟೇ ಅಲ್ಲದೇ ಬಹಮನಿಯರ ಪ್ರಭಾವವು ವಿಜಯನಗರ ವಾಸ್ತುಶಿಲ್ಪದ ಮೇಲೆ ಪ್ರಭಾವವನ್ನು ಬೀರಿತು. ವಿಜಯನಗರ ವಾಸ್ತುಶಿಲ್ಪಕ್ಕೆ ಮಹಮದೀಯರ ಪಾತ್ರವು ಪ್ರಮುಖವಾಗಿದೆ. ಇಸ್ಲಾಂ ವಾಸ್ತುಶಿಲ್ಪದ ರಚನಾತ್ಮಕ ಅಂಶಗಳು ಮತ್ತು ಅಲಂಕಾರಿಕ ತಂತ್ರಗಳು ಇವು ವಿಜಯನಗರದ ಶಿಲ್ಪಕಲೆಯಲ್ಲಿ ಕಂಡುಬರುತ್ತವೆ. ಬಹಮನಿ ಅರಸ ಶಿಲ್ಪಕಲೆಯ ಅನೇಕ ಲಕ್ಷಣಗಳು ವಿಜಯನಗರದ ಕಟ್ಟಡಗಳಲ್ಲಿಯೂ ಕಂಡುಬರುವುದರಿಂದ ಈ ಎರಡು ಶಿಲ್ಪಕಲಾ ಸಂಪ್ರದಾಯಗಳ ಮಧ್ಯೆ ತಾಂತ್ರಿಕ ಮತ್ತು ಕಲಾತ್ಮಕ ಸಂಬಂಧ ಇತ್ತು ಎಂಬುದನ್ನು ದೃಢಪಡಿಸಬಹುದು.

ಬಹಮನಿ ಅರಸರ ಕಾಲವು ವಿಜಯನಗರದ ಮೊದಲನೆ ರಾಜವಂಶ ಸಂಗಮ ಮನೆತನಕ್ಕೆ ಸಮಕಾಲೀನವಾದದ್ದು. ಹದಿನಾಲ್ಕು ಮತ್ತು ಹದಿನೈದನೆ ಶತಮಾನದುದ್ದಕ್ಕೂ ಮುಸ್ಲಿಮ್ ಸಾಮ್ರಾಜ್ಯದಲ್ಲಿ ಕಟ್ಟಡ ನಿರ್ಮಾಣದ ಚಟುವಟಿಕೆಗಳು ಭರದಿಂದ ಸಾಗಿದವು. ಹದಿನಾರನೆಯ ಶತಮಾನದ ಆರಂಭದಲ್ಲಿ ಬಹಮನಿ ರಾಜ್ಯವು ವಿಭಾಗಗೊಂಡು ಐದು ರಾಜಧಾನಿಗಳು ಹುಟ್ಟಿಕೊಂಡವು.[10] ವಿಜಯನಗರದ ಆಸ್ಥಾನದ ನಿರ್ಮಾಣಗಳು ಬಹುತೇಕ ಗುಲ್ಬರ್ಗಾ ಫಿರೋಜಾಬಾದ್ ಮತ್ತು ಬೀದರ್‌ಗಳಲ್ಲಿ ಕಂಡುಬಂದ ಬಹಮನಿ ಶಿಲ್ಪಕಲೆಯ ಪ್ರಭಾವವನ್ನು ವಿಜಯನಗರದ ವ್ಯಾಪ್ತಿಯಲ್ಲಿ ಕಂಡುಬರುವ ಮುಸ್ಲಿಮ್ ಗುಮ್ಮಟಗಳ ಮೂಲಕ ಗುರುತಿಸಬಹುದಾಗಿದೆ.

ವಿಜಯನಗರ ಆಸ್ಥಾನಕ್ಕೆ ಸಂಬಂಧಿಸಿದ ಎಲ್ಲಾ ಯೋಜನೆಗಳು ಹೆಚ್ಚು ಕಡಿಮೆ ದಕ್ಷಿಣ ಭಾರತದಲ್ಲಿ ಬಹಮನಿ ಸಂಪ್ರದಾಯದಂತೆ ಬೆಳೆದು ಬಂದ ಇಸ್ಲಾಂ ಶಿಲ್ಪಕಲೆಯನ್ನು ಹೋಲುತ್ತವೆ. ಜ್ಯಾಮಿತಿಯ ರಚನೆಯಲ್ಲಿ ಒಂದು ಅಥವಾ ಹಲವಾರು ಗುಮ್ಮಟಗಳನ್ನು ಮತ್ತು ಗೂಡುಗಳನ್ನು ಹೊಂದಿರುವ ಕೋಣೆಗಳು ದಕ್ಷಿಣ ಇಸ್ಲಾಂ ಶಿಲ್ಪಕಲೆಯ ಅತೀ ಮುಖ್ಯ ಅಂಶವಾಗಿದೆ. ಯೋಜನೆಗಳು ಬಹುತೇಕ ಸಮಮಿತಿಯಲ್ಲಿದ್ದು ವಿಭಾಗಗಳನ್ನು ಅಥವಾ ದೊಡ್ಡ ಕೋಣೆಯನ್ನು ಅಥವಾ ತೆರೆದ ಸ್ಥಳಗಳನ್ನು ಹೊಂದಿವೆ. ಮಸೀದಿ ಮತ್ತು ಗುಮ್ಮಟಗಳ ಮತ್ತು ನಂತರ ಬಂದ ಚೌಕಾಕಾರದ ಮತ್ತು ಅಷ್ಟಭುಜಾಕೃತಿಯ ಯೋಜನೆಗಳು ಕೂಡಾ ಬಹು ವಿಭಾಗದ ವ್ಯವಸ್ಥೆಯನ್ನು ಹೋಲುತ್ತವೆ.[೨೨] ಒಟ್ಟಿನಲ್ಲಿ ಹೇಳಬೇಕಾದರೆ ಮಹಮದೀಯರ ಪಾತ್ರ ವಿಜಯನಗರ ಕಾಲದ ಚರಿತ್ರೆಯಲ್ಲಿ ತುಂಬಾ ಸೊಗಸಾಗಿ ರಾಜಪ್ರಭುತ್ವದೊಂದಿಗೆ ಕೈಜೋಡಿಸಿದ್ದರು.

## ೨.೩. ವಿಜಯನಗರ ಕಾಲದಲ್ಲಿ ಹಿಂದೂ-ಮುಸ್ಲಿಮರ ಸೌಹಾರ್ದತೆ :

ವಿಜಯನಗರ ಕಾಲದಲ್ಲಿ ಹಿಂದೂ-ಮುಸ್ಲಿಮರ ಸೌಹಾರ್ದತೆ ಕೆಳಗಿನಂತೆ ವಿವರಿಸಲಾಗಿದೆ. ಕ್ರಿ.ಶ. ೧೩೩೬ರಲ್ಲಿ ಸ್ಥಾಪಿತವಾದ ವಿಜಯನಗರ ಸಾಮ್ರಾಜ್ಯದಲ್ಲಿ ಸಂಗಮ ವಂಶದ ದೊರೆಗಳು ವಿಜಯನಗರವನ್ನು ದಕ್ಷಿಣ ಹಿಂದೂಸ್ಥಾನದಲ್ಲಿ ಒಂದು ಸಾಮ್ರಾಜ್ಯದ ಸ್ಥಾನಕ್ಕೇರಿಸಿದುದರಿಂದ ಹೊಸ ಹೊಸ ಕೋಟೆಗಳನ್ನು, ನಗರಗಳನ್ನು, ಮಾರುಕಟ್ಟೆಗಳನ್ನು ನಿರ್ಮಾಣ ಮಾಡಿದರು. ಕೃಷಿ ಮತ್ತು ಆಂತರಿಕ ವ್ಯಾಪಾರೋದ್ಯೋಗಗಳ ಕಡೆಗೆ ವಿಜಯನಗರದ ಚಕ್ರವರ್ತಿಗಳು ಸಾಕಷ್ಟು ಗಮನ ಹರಿಸಿದರು. ಹೊರದೇಶ (ವಿದೇಶಿ)ರೊಡನೆ ಸಂಪರ್ಕ ಹೊಂದಿದ್ದರು. ವಿಜಯನಗರವನ್ನು ಸುಂದರ ನಗರವನ್ನಾಗಿ ಪರಿವರ್ತಿಸಿಕೊಂಡಿದ್ದರು.

ವಿಜಯನಗರ ದೊರೆಗಳ ಕಾಲದಲ್ಲಿ ಪ್ರಚಲಿತವಿದ್ದು ಧರ್ಮಗಳೆಂದರೆ: ಹಿಂದೂ, ಶೈವ, ವೈಷ್ಣವ, ವೀರಶೈವ ಮತ್ತು ಅನೇಕ ಜಾತಿಗಳು ಜೈನ, ಮುಸ್ಲಿಮ್, ಬೌದ್ಧ, ಕ್ರಿಶ್ಚಿಯನ್ ಇಡೀ ದಕ್ಷಿಣಾ ಹಿಂದೂಸ್ಥಾನದಲ್ಲಿ ಇಸ್ಲಾಂ ಧರ್ಮವು ಕರ್ನಾಟಕದಲ್ಲಿ ಆಳವಾಗಿ ಬೇರೂರಿದಂತೆ ಬೇರೆಡೆಗೆ ಬೇರೂರಿರಲಿಲ್ಲ. ಎಲ್ಲಾ ಧರ್ಮಗಳನ್ನು ಒಳಗೊಂಡ ರಾಜ್ಯ ಮನೆತಪನವೆಂದರೆ ವಿಜಯನಗರವೇ ಹೊಯ್ಸಳರು, ರಾಷ್ಟ್ರಕೂಟ ರಾಜರೂ ಆಳುತ್ತಿದ್ದ ಕಾಲದ ಕರ್ನಾಟಕದಲ್ಲಿ ಈ ಎಲ್ಲಾ ಧರ್ಮಗಳು ಇರಲಿಲ್ಲ.

ಈ ಕಾರಣದಿಂದಲೇ ವಿಜಯನಗರ ರಾಜರ ಕಾಲದಲ್ಲಿ ಧರ್ಮ ಸಹಿಷ್ಣುತೆಗೆ ಹೆಚ್ಚಿನ ಮಹತ್ವವಿದ್ದಿತ್ತು. ಪರನಾಡಿನಿಂದ ಬಂದ ಇಸ್ಲಾಂ ಈ ನಾಡಿನಲ್ಲಿ ಬೇರೂರಲು ಕಾರಣವಾದುದರಿಂದ ವಿಜಯನಗರದ ರಾಜರಿಗೆ ಹಿಂದುಗಳು ಈ ಧರ್ಮಗಳಿಗೆ ಮತಾಂತರವಾಗದಂತೆ ನೋಡಿಕೊಳ್ಳುವುದಾಗಿತ್ತು. ತಮ್ಮಲ್ಲಿಯೇ ಏಕತೆ, ಸೌಹಾರ್ದತೆಗಳನ್ನು ಕಾಪಾಡಿಕೊಳ್ಳುವುದಕ್ಕೆ ಅನುಕೂಲತೆ ಮಾಡಿಕೊಟ್ಟಿದ್ದರು. ಅತ್ಯವಶ್ಯವಿದ್ದುದರಿಂದ ಆ ರೀತಿಯ ರಾಜನೀತಿಯನ್ನು ಅನುಸರಿಸುವುದು ಅನಿವಾರ್ಯವಾಗಿತ್ತಲ್ಲದೆ ಅತ್ಯವಶ್ಯಕವೂ ಆಗಿತ್ತು. ಆದುದರಿಂದ ಸಂಗಮ ವಂಶವು ಇಂಥ ಸಂಧಿ ಕಾಲದಲ್ಲಿ ರಾಜ್ಯಭಾರ ಕೈಕೊಂಡುದರಿಂದ ಆ ವಂಶದ ಅರಸರ ಮೇಲೆ ವಿಶೇಷವಾದ ಜವಾಬ್ದಾರಿ ಇತ್ತು.

ಧಾರ್ಮಿಕ ಕ್ಷೇತ್ರದಲ್ಲಿ ವಿಶಾಲಭಾವನೆ ಬೆಳೆಸುವುದು ಅವರ ಮನೋಧರ್ಮವೇ ಆಗಿದ್ದಿತು. ಎಲ್ಲಾ ಧರ್ಮದವರೂ ಸಾಮರಸ್ಯದಿಂದ ಬಾಳಬೇಕೆಂಬುದನ್ನು ಸಾರಿದ ಘಟನೆ ಶ್ರವಣ ಬೆಳಗೋಳದ ಒಂದು ಶಾಸನದಲ್ಲಿ ಉಲ್ಲೇಖವಾಗಿದೆ. ಹೀಗಾಗಿ ರಾಜರಾದವರು ಬಹಳ ಎಚ್ಚರಿಕೆಯಿಂದ ಧಾರ್ಮಿಕ ನೀತಿಯನ್ನು ಅನುಸರಿಸಬೇಕಾಗುತ್ತಿತ್ತು. ಈ ರಾಜರ ಕಾಲದಲ್ಲಿಯೇ ಸರ್ವದರ್ಶನಗಳ ಗುರಿ ಒಂದೇ ಎಂಬ ಕಲ್ಪನೆಗೂ ಮೂಡಿ ಬಂದುದನ್ನು ಈ ಶಾಸನ ಪದ್ಯವು ಸಾರಿ ಹೇಳುತ್ತದೆ. "ದೇವರು ಇಬ್ಬರಲ್ಲಿ, ಮೂವರಲ್ಲೂ" ಒಂದೇ ಎಂಬ ಕಲ್ಪನೆ ಹಿಂದಿನಿಂದಲೇ ಬೆಳೆಯುತ್ತ ಬಂದರೂ ವಿಜಯನಗರದ ಅರಸರ ಕಾಲದಲ್ಲಿ ಅದು ಒಂದು ಮೂರ್ತಸ್ವರೂಪಕ್ಕೆ ಬಂದಿದೆ.[೩೩]

ಹಿಂದೂ-ಮುಸ್ಲಿಮರಲ್ಲಿ ಧಾರ್ಮಿಕವಾಗಿ ಆಗಾಗ ಕಲಹಗಳಾಗುತ್ತಿದ್ದವು ಆದರೂ ವಿಜಯನಗರದವರ ಕಾಲದಲ್ಲಿ ಸರ್ವೇಸಾಮಾನ್ಯವಾಗಿ ಧಾರ್ಮಿಕ ಅತಿರೇಕಭಾವವು ಕಡಿಮೆಯಾಗಿ, ಹೊಂದಾಣಿಕೆಯ ಸ್ವಭಾವವು ಜನರಲ್ಲಿ ಬೆಳೆಯುತ್ತಿತ್ತು. ಅಲ್ಪಸಂಖ್ಯಾತರ ಹಿತರಕ್ಷಣೆಗೆ ವಿಜಯನಗರದ ರಾಜರು ಹೆಚ್ಚಾಗಿ ಗಮನಹರಿಸಿದ್ದರು.

ಪ್ರೌಢದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ವೈಭವದ ಶಿಖರವನ್ನೇ ತಲುಪಿತು. ಅದಕ್ಕೆ ಕಾರಣಗಳು ಹೀಗಿವೆ :

೧. ಆಂತರಿಕ ಶಾಂತಿ

೨. ಪ್ರೀತಿಸುವ ಜನಸಮುದಾಯ

೩. ಸಂತೃಪ್ತಿ ಪ್ರಜೆಗಳು

೪. ಸಾಮಾಜಿಕ ಪರಿಸರ ಪ್ರೇಮ

೫. ಕೃಷಿ ಸಂಪತ್ತು

೬. ಆಂತರಿಕ ವ್ಯಾಪಾರಾಭಿವೃದ್ಧಿ ಹಾಗೂ

೭. ವಿದೇಶಗಳೊಡನೆ ಸರಕುಗಳ ಆಮದು ಹಾಗೂ ರಫ್ತುಗಳ ವ್ಯವಸ್ಥೆ ಇತ್ಯಾದಿ.[೩೪]

ಈತನ ಸಾಮ್ರಾಜ್ಯದಲ್ಲಿ ಸುಮಾರು ಮೂರುನೂರು ಕಾರ್ಯನಿರತ ಬಂದರುಗಳು ಅನೇಕ ಗಣ್ಯನಗರ ಹಾಗೂ ಪಟ್ಟಣಗಳು ಇದ್ದವೆಂದು ಅಬ್ದುಲ್ ರಜಾಕ್ ತಿಳಿಸುತ್ತಾನೆ. ಯಾವುದೇ ರಾಜ್ಯವು ಸುಖ ಸಮೃದ್ಧಿಗಳಿಂದ ಕೂಡಿರಬೇಕಾದರೆ ಆ ರಾಜ್ಯದಲ್ಲಿ ಸಾಮಾಜಿಕ ಹೊಂದಾಣಿಕೆ ಮತ್ತು ಜನರಲ್ಲಿ ಧಾರ್ಮಿಕ ಸಹಿಷ್ಣುತೆ ಇರಬೇಕಾಗುತ್ತದೆ.

ಮುಸ್ಲಿಮರನ್ನು ಅಂದಿನವರೆಗೆ ಹಿಂದುಗಳ ವೈರಿಗಳೆಂದು ಪರಿಗಣಿಸುತ್ತಿದ್ದರೂ ೨ನೆಯ ದೇವರಾಯನು ಕೆಲವು ಮುಸ್ಲಿಮರನ್ನು ತನ್ನ ಸೈನ್ಯದಲ್ಲಿ ಸೇರಿಸಿಕೊಂಡು ಅವರನ್ನು ಸಹಾನುಭೂತಿಯಿಂದ ನೋಡಿದುದಲ್ಲದೆ, ಅನೇಕರು ವಿಜಯನಗರದ ರಾಜ್ಯದಲ್ಲಿ ಮನೆಮಾಡಿಕೊಂಡಿದ್ದು ಸುಖ-ಶಾಂತಿ ನೆಮ್ಮದಿಯಿಂದ ಬಾಳುತ್ತಿದ್ದರು.

ವಿಜಯನಗರದಲ್ಲಿ ವಾಸವಾಗಿದ್ದ ಮುಸ್ಲಿಮರಿಗಾಗಿಯೇ ಎರಡನೆಯ ದೇವರಾಯನು ಒಂದು ಮಸೀದಿಯನ್ನು ಕಟ್ಟಿಸಿಕೊಟ್ಟದ್ದು, ಅವರ ಉದಾರ ಧಾರ್ಮಿಕ ಮನೋಭಾವನೆಯ ಕುರುಹಾಗಿದೆ. ಮುಸಲ್ಮಾನರ ಮತೀಯ ಭಾವನೆಗೆ ಧಕ್ಕೆಯಾಗದಂತೆ ಮುಸ್ಲಿಮ್ ಬಾಂಧವರಿಗಾಗಿ ಸಿಂಹಾಸನದ ಹತ್ತಿರ ಕುರಾನದ ಪ್ರತಿಯನ್ನು ಇರಿಸುತ್ತಿದ್ದನಂತೆ. ಇಟಲಿ ದೇಶದ ಪ್ರವಾಸಿ ನಿಕೋಲೊ-ಕೊಂಟಿ ವಿಜಯನಗರವನ್ನು ನೋಡುದ್ದುದಾಗಿ ಬರೆದಿದ್ದಾನೆ.

ಈ ನಗರದ ಸುತ್ತಳತೆ ಸುಮಾರು ಅರವತ್ತು ಮೈಲುಗಳಷ್ಟಿದ್ದು ಸುಮಾರು ತೊಂಭತ್ತು ಮೀಟರು ಈ ನಗರವಿತ್ತೆಂದು ವರದಿ ಮಾಡಿದ್ದಾನೆ. ಅದೇ ಇನ್ನೊಬ್ಬ ವಿದೇಶಿಯನಾದ ಪರ್ಶಿಯಾ ದೇಶದ ರಾಯಭಾರಿ ಅಬ್ದುಲ್ ರಜಾಕ್ ಹೀಗೆ ಬರೆದಿದ್ದಾನೆ. ಪ್ರೌಢದೇವರಾಯನು ತನ್ನ ಉನ್ನತ ಗೆಳೆಯ ಅಬ್ದುಲ್ ರಜಾಕ್ ಈತನನ್ನು ಕೊಂಡಾಡಿದ್ದಾನೆ.

ಪ್ರೌಢದೇವರಾಯನಂತಹ ಇನ್ನೊಬ್ಬ ಚಕ್ರವರ್ತಿ ಭಾರತದಲ್ಲಿ ದೊರೆಯುವುದು ವಿರಳ. ೨ನೆಯ ದೇವರಾಯನ ಕಾಲದಲ್ಲಿ ವಿಜಯನಗರವು ಅತ್ಯಂತ ವೈಭವವನ್ನು ಪಡೆಯಿತೆಯೆಂಬುದನ್ನು ಅದಕ್ಕೆ ಪ್ರೌಢರಾಯನಂತೆಯೇ ಅವರ ನಿಷ್ಠಾವಂತ ಶೂರ ಸೇನಾನಿಗಳು, ಮಂತ್ರಿಗಳು ಕಾರಣರಾಗಿದ್ದರೆಂಬುದಕ್ಕೆ ಅನೇಕ ರೀತಿಯ ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕ ಚಟುವಟಿಕೆಗಳು ನೆರವೇರಿದವು.

ವಿಜಯನಗರ ಸಾಮ್ರಾಜ್ಯದಲ್ಲಿಕೆಲವು ಮತಗಳ ಜನರು ಇದ್ದರೆಂದು ಹೇಳಲಾಗಿದೆ. ರಾಜರು ಯಾವುದೇ ಮತವನ್ನು ಪೋಷಿಸಿದರೂ ಇತರ ಮತಗಳವರನ್ನು ಸಹಿಷ್ಣುತಾ ಭಾವನೆಯಿಂದಲೇ ನೋಡುತ್ತಿದ್ದರು. ಬಾರ್ಬೋಸ ಮತ್ತು ಪೇಸ್ ಇವರನ್ನು ವಿಜಯನಗರದ ಅರಸರ ಮತೀಯ ಸಹನೆಯ ಭಾವನೆಗಳನ್ನು ಕೊಂಡಾಡಿದ್ದಾನೆ.

ವಿಜಯನಗರ ಸಾಮ್ರಾಜ್ಯದಲ್ಲಿ ಈ ವೇಳೆಗೆ ಇಸ್ಲಾಂ ಧರ್ಮವು ಭಾರತದ ಉದ್ದಗಲ್ಲಕ್ಕೂ ಪ್ರಚಾರವಾಗಿತ್ತು. ದಕ್ಷಿಣದಲ್ಲಿ ಮುಸ್ಲಿಮ್ ನವಾಬರು, ಇಸ್ಲಾಂ ಧರ್ಮದ ಪ್ರಚಾರ ಮಾಡುತ್ತಿದ್ದರು. ವಿಜಯನಗರದ ಅರಸರು ಇಸ್ಲಾಂ ಧರ್ಮದ ಅನುಯಾಯಿಗಳನ್ನು ಉದಾರ ಭಾವನೆಯಿಂದ ನೋಡುತ್ತಿದ್ದರು.

೨ನೆಯ ದೇವರಾಯನ ಕಾಲದಲ್ಲಿ ಇಸ್ಲಾಂ ಧರ್ಮಕ್ಕೆ ಹೆಚ್ಚಿನ ಪ್ರಾಮುಖ್ಯತೆ ದೊರೆಯಿತು. ಅಮೀರ್‌ಖಾನ್-ಐನ್-ಮುಕ್ಕಾ ದಿಲಾವರಖಾನ್ ಎಂಬ ಮುಸ್ಲಿಮ್ ದಂಡನಾಯಕರು ವಿಜಯನಗರ ಸೈನ್ಯದಲ್ಲಿದ್ದರು. ಮುಸ್ಲಿಮರು ಭಾರತೀಯ ಜೀವನ ಶೈಲಿಯೊಂದಿಗೆ ಬೆರೆತು ಮತ್ತು ಸಹಬಾಳ್ವೆಯ ಜೀವನ ನಡೆಸುತ್ತಿದ್ದರು. ಹಿಂದೂ-ಮುಸ್ಲಿಮರಲ್ಲೂ ಮತೀಯ ಕಲಹಗಳಿರಲಿಲ್ಲ ಬಾರ್ಬೋಸ, ನ್ಯೂನಿಜ್, ಅಬ್ದುಲ್ ರಜಾಕನು ವಿಜಯನಗರ ಅರಸರ ಉದಾರ ಧಾರ್ಮಿಕ ನೀತಿಯನ್ನು ಪ್ರಶಂಸಿಸಿದ್ದಾರೆ.

ಈ ಎಲ್ಲಾ ಕಾರಣಗಳಿಂದ ವಿಜಯನಗರ ಸಾಮ್ರಾಜ್ಯವು ಮಹಮದೀಯರ ಏಳ್ಗೆಗೆ ಪ್ರೋತ್ಸಾಹಿಸಿದ್ದು ಅರಸರ, ದಾಖಲೆಗಳ ಮತ್ತು ವಿದೇಶಿಯರ ಅಭಿಪ್ರಾಯಗಳಿಂದ ತಿಳಿಯಬಹುದಾಗಿದೆ. ಹಿಂದೂ-

ಮುಸ್ಲಿಮರು ಸೌಹಾರ್ದ ಸಂಬಂಧವನ್ನು ಗಟ್ಟಿಪಡಿಸಿಕೊಳ್ಳಲು ವಿಜಯನಗರ ಅರಸರ ಜಾತ್ಯಾತೀತ ಮನೋಭಾವನೆಯೇ ಕಾರಣ ಯಾವುದೇ ಧರ್ಮದ ಭೇದಭಾವವಿಲ್ಲದೆ ಮಹಮದೀಯರಿಗೆ ಸೈನಿಕ, ದಂಡನಾಯಕ, ವ್ಯಾಪಾರ ಇತರ ಕ್ಷೇತ್ರಗಳಲ್ಲಿ ಜೀವನ ನಡೆಸಲು ಹಾಸುಹೊಕ್ಕಾದ ಪರಿಸರವನ್ನು ನಿರ್ಮಿಸಿಕೊಟ್ಟಿದ್ದರು. ಯಾವುದೊಂದು ಮತಧರ್ಮದ ಪರವಾಗಿ ವಿಜಯನಗರದ ಅರಸರು ಬೇಧಭಾವ ಅವ್ಯವಹಾರ ಮಾಡಲಿಲ್ಲ. ಅವರು ಆಂತರಿಕ ಮತೀಯ ಸಾಮರಸ್ಯವನ್ನು ಪ್ರೋತ್ಸಾಹಿಸಿದ ಉದಾಹರಣೆಗಳಿವೆ.

ವಿಜಯನಗರದ ಕಾಲದಲ್ಲಿ ಕ್ರೈಸ್ತ, ಯಹೂದಿ, ಮುಸ್ಲಿಮ್, ಹಿಂದೂ ಯಾರೇ ಆಗಲಿ ಅವರ ಧರ್ಮದ ಯಾವುದೆಂದು ಪ್ರಶ್ನಿಸದೆ ಅವರವರ ಧಾರ್ಮಿಕ ನಂಬಿಕೆಗಳನ್ನು ಅನುಸರಿಸಲು ವಿಜಯನಗರದ ರಾಜ್ಯದಲ್ಲಿ ಪೂರ್ಣ ಸ್ವಾತಂತ್ರ್ಯವಿತ್ತೆಂದು ವಿದೇಶಿ ಪ್ರವಾಸಿ ಬಾರ್ಬೋಸ್ ಬರೆದಿದ್ದಾನೆ.

ಮುಸ್ಲಿಮ್ ಬಂಧುಗಳ ಉಪಯೋಗಕ್ಕಾಗಿ ರಾಜಧಾನಿಯಲ್ಲಿ ಮಸೀದಿಯನ್ನು ಕಟ್ಟಿಸಿಕೊಟ್ಟಿದ್ದಲ್ಲದೇ ಪವಿತ್ರ ಕುರಾನಿನ ಪ್ರತಿಯನ್ನು ಸಿಂಹಾಸನದ ಸಭಾಭವನದಲ್ಲಿ ಇಡಲಾತ್ತೆಂಬ ಉಲ್ಲೇಖವಿದೆ. ಅಹಮದ್‌ಖಾನ್ ಎಂಬ ಮುಸ್ಲಿಂ ಅಧಿಕಾರಿ ಇಮ್ಮಡಿ ದೇವರಾಯನಿಗೆ ಪುಣ್ಯವಾಗಲೆಂದು ಒಂದು ಮಸೀದಿಯನ್ನು ಕಟ್ಟಿಸಿದನೆಂದು ಹೇಳಲಾಗಿದೆ.[೩೪] ಮೊದಲನೆಯ ಹರಿಹರನ ಕಾಲದಲ್ಲಿ ಹೊನ್ನಾವರದಲ್ಲಿ ಒಬ್ಬ ದೊಡ್ಡ ಮುಸ್ಲಿಮ್ ಅಧಿಕಾರಿದ್ದನು. ಇವನನ್ನು ವಿದೇಶಿ ಪ್ರವಾಸಿ ಇಬ್ನಬತೂತ್ 'ಸುಲ್ತಾನ್'ನೆಂದು ಕರೆದಿದ್ದಾನೆ. ವಿಜಯನಗರ ಸೈನ್ಯದಲ್ಲಿ ಮುಸ್ಲಿಮರನ್ನು ಸೇರಿಸಿಕೊಳ್ಳುವ ರೂಢಿ ಇತ್ತು. ಅದು ಅಳಿಯ ರಾಮರಾಯನ ಕಾಲದಲ್ಲಿ ಹೆಚ್ಚಳವನ್ನು ಪಡೆಯಿತು. ವಿದೇಶಿ ಮುಸ್ಲಿಮರು ಭಾರತಕ್ಕೆ ತಂದಿದ್ದ ವಾಸ್ತುಶಿಲ್ಪದ ಶೈಲಿಯನ್ನು ವಿಜಯನಗರದ ಅರಸರು ಸ್ವೀಕರಿಸಿ ತಮ್ಮ ಕೆಲವು ಕಟ್ಟಡಗಳಲ್ಲಿ ಅಳವಡಿಸಿದ್ದನ್ನು ಕಾಣುತ್ತೇವೆ.

ಯಾವ ಕೋಮು, ಧರ್ಮ ಅಥವಾ ಮತದ ಬಗ್ಗೆ ವಿಜಯನಗರದ ರಾಜರ ಮತ್ತು ಪ್ರಜೆಗಳ ವಿರೋಧವಿರಲಿಲ್ಲ. ಧರ್ಮ-ಮತವನ್ನು ರಾಜಕೀಯದೊಡನೆ ಬೆರೆಸುವ ರೂಢಿ ಭಾರತ ದೇಶದಲ್ಲಿ ಪ್ರಾಚೀನ ಕಾಲದಿಂದ ನಡೆದುಬಂದಿರುವ ಪರಮತ, ಪರಧರ್ಮ ಸಹಿಷ್ಣುತೆ ಮತ್ತು ಗೌರವದ ಉದಾತ್ತ ಮನೋಭಾವದ ಪರಂಪರೆಯನ್ನು ವಿಜಯನಗರವು ಅನುಸರಿಸಿತು.

ವಿಜಯನಗರ ಕಾಲದಲ್ಲಿ ಹಿಂದೂ-ಮುಸ್ಲಿಮರು ಸೌಹಾರ್ದತೆಗೆ ಒಂದು ಅತ್ಯುತ್ತಮ ಉದಾಹರಣೆಯೆಂದರೆ ಪೀರ್ಲ ಹಬ್ಬ ಅಥವಾ ಮೊಹರಂ ಹಬ್ಬ. ಹಿಂದೂ-ಮುಸ್ಲಿಮ್ ಯಾವುದೇ ಬೇಧಭಾವವಿಲ್ಲದೇ ಈ ಹಬ್ಬವನ್ನು ಆಚರಿಸುತ್ತಿದ್ದರು. ವಿಜಯನಗರದಲ್ಲಿ ಅನೇಕ ಮುಸ್ಲಿಮರಿದ್ದರು. ಈ ಸಾಮ್ರಾಜ್ಯದ ಅರಸರು ಉದಾರ ನೀತಿಯ ಭಾವನೆಯನ್ನು ತಳೆದಿದ್ದರು ಮುಸ್ಲಿಮರು ಮತ್ತು ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪ ವಿಜಯನಗರ ಸಾಮ್ರಾಜ್ಯದಲ್ಲಿ ಕಾಣಬಹುದು.[೩೭]

ವಿಜಯನಗರ ಸಂಸ್ಥಾನವು ಮುಸ್ಲಿಮರ ಆಕ್ರಮಣದಿಂದ ನಾಶವಾಯಿತು ಎಂದು ಇತಿಹಾಸ ಹೇಳುತ್ತದೆ. ಲಿಖಿತ ಇತಿಹಾಸದ ಈ ನಿಲುವಿಗೆ ಜಾನಪದ ಹೀಗೆ ಪ್ರತಿಕ್ರಿಯಿಸಿದೆ ಎಂದು ನೋಡ ಹೊರಟರೆ

ಭಿನ್ನ ಚರಿತ್ರೆಯೇ ಸಿಗುತ್ತದೆ. ಹಂಪಿ ಪರಿಸರದಲ್ಲಿ ಹಿಂದೂ-ಮುಸ್ಲಿಮರ ಸಾಮರಸ್ಯದ ಬಗೆಗೆ ನಂಬಿಕೆ ಮತ್ತು ಆಚರಣೆಗಳಿವೆ. ಮೊಹರಂ ಅಥವಾ ಪೀರ್ಲ ಹಬ್ಬವು ಹಂಪಿ ಪರಿಸರದಲ್ಲಿ ಪ್ರಚಲಿತದಲ್ಲಿರುವ ಹಿಂದೂ-ಮುಸ್ಲಿಮ್ ಸಾಮರಸ್ಯಕ್ಕೆ ಒಳ್ಳೆಯ ಉದಾಹರಣೆಯಾಗಿದೆ.

ಮುಸಲ್ಮಾನರ ಕಾಲದ ಕಲ್ಪನೆಯಲ್ಲಿ ಮೊಹರಂ ಮೊದಲ ತಿಂಗಳಿನ ಹೆಸರು. ಈ ತಿಂಗಳಲ್ಲಿ ನಡೆಯುವ ಹಬ್ಬವಾದುದರಿಂದ ಇದಕ್ಕೆ ಮೊಹರಂ ಹಬ್ಬ ಎಂಬ ಹೆಸರು ಬಂತೆಂದು ಹೇಳಲಾಗಿದೆ.[೨೪]

ಹತ್ತು ದಿನಗಳ ಕಾಲ ನಡೆಯುವ ಈ ಹಬ್ಬಕ್ಕೆ ಹಿನ್ನಲೆಯಾಗಿ ಒಂದು ಕತೆಯಿದೆ. ಇಸ್ಲಾಂ ಧರ್ಮದ ಸಂಸ್ಥಾಪಕನಾದ ಮಹಮ್ಮದ್ ಪೈಗಂಬರ ತೀರಿಕೊಂಡ ಕೆಲವು ವರುಷಗಳ ಅನಂತರ ನಡೆದ ಘಟನೆಯೇ ಈ ಹಬ್ಬಕ್ಕೆ ಪ್ರೇರಣೆ ನೀಡಿದೆ. ಮಹಮ್ಮದ್ ಪೈಗಂಬರನ ಅಳಿಯನಾದ ಹಜರ್ ಅಲಿಯು ನ್ಯಾಯ ಪಕ್ಷಪತಿಯಾಗಿದ್ದು, ಜನರನ್ನು ಮಕ್ಕಳಂತೆ ನೋಡಿಕೊಳ್ಳುತ್ತಿದ್ದರು. ಇವರ ನಂತರ ಇವರ ಹಿರಿಯ ಮಗನಾದ ಹಜರತ್ ಇಮಾಂ ಹಸನ್ ಅಧಿಕಾರಕ್ಕೆ ಬಂದನು. ಆದರೆ ಇವರ ಕಾಲದಲ್ಲಿ ಸಿರಿಯಾದ ಅಧಿಕಾರಿಯಾಗಿದ್ದ.[೨೫] ಅಮೀರ ಮುವಾಯಿಯೂ, ಹಜರತ್ ಇಮಾಂ ಹಸನನ್ನು ಸೋಲಿಸಿ ಪೀಠಕ್ಕೇರಿದ ಈತ ಜನಾಭಿಪ್ರಾಯವನ್ನು ಗಳಿಸಲಿಲ್ಲ. ಮಾತ್ರವಲ್ಲ ತನ್ನ ಮಗನಾದ ಯಾಜೀದನೇ ಪಟ್ಟಕ್ಕೆ ಬರುವಂತೆ ಕುಯುಕ್ತಿ ನಡೆಸಿದ.

ಯಾಜೀದನೂ ಕ್ರೂರಿಯಾಗಿದ್ದ. ಜನರೆಲ್ಲಾ ಮಹಮ್ಮದ್ ಪೈಗಂಬರನ ಮೊಮ್ಮಗನಾದ ಇಮಾಂ ಹಸನನ ಮೊರೆ ಹೊಕ್ಕರು. ಹಸನನು ಜನಾಭಿಪ್ರಾಯಕ್ಕೆ ಮಣಿದು ಯಾಜೀದನೊಡನೆ ಹೋರಾಟಕ್ಕೆ ಸಿದ್ಧನಾದ ಆದರೆ ಯುದ್ಧ ಆರಂಭವಾಗುವ ಮುನ್ನವೇ ಯಾಜೀದನ ಸೈನ್ಯಕ್ಕೆ ಸೆರೆ ಸಿಗುತ್ತದೆ. ಅಮಾನುಷವಾದ ಹಿಂಸೆಗೆ ಒಳಗಾಗುತ್ತದೆ. ಹುಸೇನನ ಮಗುವಾದ ಆಲಿ ಆಸಗರನನ್ನು ನೀರಿಗಾಗಿ ಬೇಡಿಕೊಳ್ಳುವಾಗ ಅಮಾನುಷವಾಗಿ ಹತ್ಯೆ ಮಾಡುಲಾಗುತ್ತದೆ. ಹೀಗೆ ಹತ್ತು ದಿನ ಹೋರಾಟ ನಡೆಯುತ್ತದೆ. ಹತ್ತನೆಯ ದಿನದಂದು ಯಾಜೀದನ ಸೈನ್ಯದಲ್ಲಿದ್ದ ಸಿವಾರ ಅಥವಾ ಶಮರ ಎಂಬುವನು ಹುಸೇನನ್ನು ಕೊಂದುಬಿಡುತ್ತಾನೆ.

ಹೀಗೆ ಈ ಕತೆಯು ನ್ಯಾಯ-ಅನ್ಯಾಯಗಳ ನಡುವೆ ನಡೆದ ಹೋರಾಟದಲ್ಲಿ ಅನ್ಯಾಯವೇ ಗೆಲುವು ವಿಧಿಸಿದ ಪರಿಯನ್ನು ವಿವರಿಸುತ್ತದೆ. ನ್ಯಾಯಕ್ಕಾಗಿ ಸತ್ತವರ ಈ ಕಣ್ಣೀರಿನ ಕತೆಯನ್ನು ಹಂಪಿ ಪರಿಸರದಲ್ಲಿ ಜನರು ತಮ್ಮದೇ ಕತೆಯೆಂಬಂತೆ ಬಣ್ಣಿಸುತ್ತಾರೆ. ಹುಸೇನನ ಮಗನಾದ ಅಸಗರನು ನೀರಿಗಾಗಿ ಬೇಡಿಕೊಂಡಾಗ 'ನಮ್ಯಾಲೆ ಮುನಿದಾನೊ ಪರಮೇಶ್ವರ' ಎಂಬ ಸಾಲುಬಂದು, ಹಿಂದೂ-ಮುಸ್ಲಿಂ ವ್ಯತ್ಯಾಸವನ್ನು ಪೂರ್ಣ ಅಳಿಸಿ ಹಾಕಿದ. ಈ ಕತೆಯನ್ನು ಕೇಳಲು ಹಿಂದೂ-ಮುಸ್ಲಿಮ್ ಧರ್ಮದ ಜನರೆಲ್ಲಾ ಕಲಿಯುತ್ತಾರೆ. ಈ ಪೀರ್ಲ ದೇವರ ಆಚರಣೆಯಲ್ಲಿ ದಲಿತರು, ಬೇಡರು, ಅಗಸರು, ಆಯಣರರು ಹೆಚ್ಚು ಸಕ್ರೀಯವಾಗಿ ಭಾಗವಹಿಸುತ್ತಾರೆ. ಹೀಗೆ ಹಂಪಿ ಪರಿಸರದ ಮೊಹರಂ ಹಬ್ಬವು

ಹಿಂದೂ-ಮುಸ್ಲಿಮರ ಭಾವೈಕ್ಯತೆಯನ್ನು ಇಂದಿಗೂ ಸೊಗಸಾಗಿ ಪ್ರತಿನಿಧಿಸುತ್ತದೆ. ಇದು ಹಿಂದೂ-ಮುಸ್ಲಿಮರ ಸೌಹಾರ್ದತೆಯ ಪ್ರತೀಕ ಈ ಹಬ್ಬ.[೩೯]

**ಟಿಪ್ಪಣಿಗಳು**

೧. ಸಿ.ಮಹದೇವ ಇತರರು, **ಹೊಸಪೇಟೆ ತಾಲೂಕು ದರ್ಶನ,** ಪುಟ ೫

೨. ಡಾ.ಬಸವರಾಜ ಮಲಶೆಟ್ಟಿ, ೧೯೮೧, **ಹಂಪಿ ಒಂದು ಪರಿಚಯ,** ಪುಟ ೫

೩. ಎಸ್.ಶ್ರೀನಿವಾಸಚಾರ್, **ಹಂಪಿ,** ವಿಜಯನಗರ ಸಾಮ್ರಾಜ್ಯದ ಪ್ರಖ್ಯಾತ ರಾಜಧಾನಿ

೪. ಪ್ರೊ.ವಿ.ರಾಘವೇಂದ್ರರಾವ್, **ವಿಜಯನಗರ,** ಪುಟ ೧೦-೧೧

೫. ಕೆ.ಶಿವಣ್ಣ, **ಕರ್ನಾಟಕ ಚರಿತ್ರೆ, ಸಂ ೩,** ಪುಟ ೧೧

೬. ಇತಿಹಾಸ ರಚನಾಶಾಸ್ತ್ರ, ಪುಟ ೩೦

೭. ಪ್ರೊ.ವಿ.ರಾಘವೇಂದ್ರರಾವ್, **ವಿಜಯನಗರ,** ಪುಟ ೧೧

೮. ರಾಬರ್ಟ್ ಸಿವೆಲ್, (ಅನು), ಸದಾನಂದ ಕನವಳ್ಳಿ, ೧೯೯೨, **ಮರೆದುಹೋದ ಮಹಾಸಾಮ್ರಾಜ್ಯ ವಿಜಯನಗರ,** ಪುಟ ೪-೫

೯. ಪ್ರೊ.ಸಂ.ಶಿ.ಭೂಸನೂರಮಠ, **ವಿಜಯ ಕಲ್ಯಾಣ,** ಪುಟ ೧೪-೧೫

೧೦. ಸಿ.ಮಹದೇವ ಇತರರು, **ಹೊಸಪೇಟೆ ತಾಲ್ಲೂಕು ದರ್ಶನ,** ಪುಟ ೩೦-೩೧

೧೧. ಕೆ.ಎಸ್.ಶಿವಣ್ಣ, **ಕರ್ನಾಟಕ ಚರಿತ್ರೆ, ಸಂ ೩,** ಪುಟ ೧೩-೧೪

೧೨. ಕೆ.ಕುಶಾಲಪ್ಪಗೌಡ, **ಮಧುರಾ ವಿಜಯಂ,** ಪುಟ ೯

೧೩. ಅದೇ ಸಂ ೩, ಪುಟ ೧೫-೧೬

೧೪. ಡಾ.ಬಸವರಾಜ ಮಲಶೆಟ್ಟಿ, **ಹಂಪಿ ಒಂದು ಪರಿಚಯ,** ಪುಟ ೮

೧೫. ಡಾ..ಎಚ್.ತಿಪ್ಪೇರುದ್ರಸ್ವಾಮಿ, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಪುಟ ೧೩೮

೧೬. ಅದೇ ಸಂ ೩, ಪುಟ ೩೩

೧೭. ಅದೇ ಸಂ ೩, ಪುಟ ೨೬

೧೮. ಅದೇ ಸಮೀಕ್ಷೆ, ಪುಟ ೧೪೦-೧೪೨

೧೯. ಅದೇ ಸಂ ೩, ಪುಟ ೩೩-೩೪

೨೦. ಪ್ರೊ.ಸಂ.ಶಿ.ಭೂಸನೂರಮಠ, **ವಿಜಯ ಕಲ್ಯಾಣ,** ಪುಟ ೩೧-೩೨

೨೧. ಅದೇ, ಪುಟ ೩೩-೪೦

೨೨. ಅದೇ, ಪುಟ ೪೧

೨೩. ಅದೇ, ಪುಟ ೫೭

೨೪. ಅನಿಲಾ ವರ್ಗೀಸ್, ರೀಲಿಜಿಯಸ್ ಟ್ರೇಡಿಷನ್ ಎಟ್ ವಿಜಯನಗರ, (Riligious traditions At Vijayanagar), ಪುಟ ೧೨೫

೨೫. ಅದೇ, ಪುಟ ೧೨೫

೨೬. ಅದೇ, ಪುಟ ೧೨೬

೨೭. ಅದೇ, ಪುಟ ೧೨೭

೨೮. ಅದೇ, ಪುಟ ೧೨೮

೨೯. ಅದೇ, ಪುಟ ೧೨೯

೩೦. ಅದೇ, ಪುಟ ೧೩೦

೩೧. ಜಾಜ್ ಮಿಶೆಲ್, **ವಿಜಯನಗರ ಕೋರ್ಟ್ ಸ್ಟೈಲ್,** ಪುಟ ೪೮

೩೨. ಅದೇ, ಪುಟ ೪೯

೩೩. ಪ್ರೊ.ಸಂ.ಶಿ.ಭೂಸನೂರಮಠ, **ವಿಜಯ ಕಲ್ಯಾಣ,** ಪುಟ ೩೧

೩೪. ಅದೇ, ಪುಟ ೪೦

೩೫. ಅದೇ, ಪುಟ ೪೧

೩೬. ಅದೇ, ಪುಟ ೫೭

೩೭. ಡಾ.ಪುರುಷೋತ್ತಮ ಬಿಳಿಮಲೆ, ಚೆಲುವರಾಜು, **ಹಂಪಿ ಜಾನಪದ,** ಪುಟ ೦೧

೩೮. ಅದೇ, ಪುಟ ೦೨

೩೯. ಅದೇ, ಪುಟ ೦೩

# ಅಧ್ಯಾಯ ಮೂರು

## ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಉಗಮ ಮತ್ತು ವಿಕಾಸ

೩.೧ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಲಕ್ಷಣಗಳು

೩.೨ ದಕ್ಷಿಣ ಭಾರತ

೩.೩ ವಿಜಯನಗರ ಕಾಲದಲ್ಲಿ ಇಂಡೋ-ಇಸ್ಲಾಮಿಕ್
ಶಿಲ್ಪ ಕಲೆಯ ಪ್ರಭಾವ

# ಅಧ್ಯಾಯ ಮೂರು

## ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಉಗಮ ಮತ್ತು ವಿಕಾಸ

ಭಾರತವು ಬಹುಧರ್ಮ, ಜಾತಿ, ಭಾಷೆ, ಸಂಸ್ಕೃತಿಗಳ ಆವಾಸ ಕೇಂದ್ರವಾಗಿದೆ. ಇಲ್ಲಿ ಪ್ರಾಚೀನ ಕಾಲದಿಂದಲೂ ಮಾನವ ಬದುಕಿ ಬಾಳಿದ ಕುರುಹುಗಳನ್ನು ಬಿಟ್ಟು ಹೋಗಿರುವುದು ಸ್ಮರಣೀಯ. ಗುಹೆ ದೇವಾಲಯ, ಶಿಲ್ಪ, ಗುಡಿ-ಗುಂಡಾರ ಅಲ್ಲದೇ ಮಸೀದಿ, ಚರ್ಚ್, ಗುರುದ್ವಾರ, ಜೈನಾಲಯ, ಬಸದಿ, ಮೊದಲಾದವುಗಳಿಗೆ ಪ್ರೋತ್ಸಾಹ ಕೊಟ್ಟಿರುವ ಉದಾಹರಣೆಗಳಿವೆ. ಭಾರತೀಯ ವಾಸ್ತುಶೈಲಿಯ ಬಗೆಗಳಲ್ಲಿ ಹಿಂದೂ ವಾಸ್ತುಶಿಲ್ಪಕ್ಕೆ ಹೆಚ್ಚಿನ ಮಹತ್ವವನ್ನು ಕೊಡಲಾಗಿದೆ. ಅವುಗಳಲ್ಲಿ ನಾಗರ, ದ್ರಾವಿಡ, ವೇಸರ ಎಂದು ಮೂರು ಬಗೆಗಳನ್ನು ಹೊಂದಿರುವ ಸ್ಮಾರಕಗಳನ್ನು ನಿರ್ಮಿಸಿಕೊಂಡು ಬಂದಿರುವ ಆಳರಸರ ಕಾರ್ಯ ಶ್ಲಾಘನೀಯವಾದುದ್ದಾಗಿದೆ. ಹೀಗೆ ಹಿಂದೂ ವಾಸ್ತುಶಿಲ್ಪ ಅಲ್ಲದೇ ಭಾರತದಲ್ಲಿ ಫ್ರೆಂಚ್, ಇಂಗ್ಲಿಷ್, ಡಚ್ಚ್ ಮೊದಲಾದವರ ಪ್ರಭಾವದಿಂದ ಸ್ಮಾರಕಗಳು ಆಯಾ ಶೈಲಿಯಲ್ಲಿ ನಿರ್ಮಾಣಗೊಂಡವು. ಕ್ರಿಶ್ಚಿಯನ್ನರು ಚರ್ಚ್‌ನ್ನು ಪೂಜ್ಯಭಾವನೆಯಿಂದ ನೋಡುವಂತೆ ಮಹಮದೀಯರು ಮಸೀದಿಯನ್ನು ಹಿಂದೂಗಳು ಮಂದಿರಗಳನ್ನು, ಸಿಖ್ಖರು ಗುರುದ್ವಾರಗಳನ್ನು ಜೈನರು ಬಸದಿಯನ್ನು ಅವಲಂಭಿಸಿರುವುದನ್ನು ಕಾಣುತ್ತೇವೆ. ಪ್ರಜಾಪ್ರಭುತ್ವ ರಾಷ್ಟ್ರವಾದ ಭಾರತದಲ್ಲಿ ವೈವಿಧ್ಯತೆಯಲ್ಲಿ ಏಕತೆಯನ್ನು ಕಾಣುವುದು ಸಾಧ್ಯವಾಗಿಲ್ಲ. ಈ ಎಲ್ಲಾ ಕಾರಣಗಳಿಂದ ನಾಗರಿಕತೆಯನ್ನು ರೂಪಿಸುವ ಮಾತೃಕೆಯಾದ ವಾಸ್ತುಶಿಲ್ಪವು ಜನಜೀವನದ ಮೇಲೆ ತೀವ್ರವಾದ ಪರಿಣಾಮವನ್ನು ಬೀರಿದೆ. ಸೌದಿ ಅರೇಬಿಯಾ, ಟರ್ಕಿ, ಪರ್ಶಿಯಾ, ಆಫ್ಘಾನಿಸ್ಥಾನ್ ಬಲುಚಿಸ್ತಾನ್ ಮೊದಲಾದ ದೇಶಗಳ ಸಂಪರ್ಕದಿಂದ ಭಾರತಕ್ಕೆ ಮುಸ್ಲಿಮ್ ವಾಸ್ತುಶಿಲ್ಪ ಆಗಮನವಾಯಿತು. ದೆಹಲಿ ಸುಲ್ತಾನರ ಆಳ್ವಿಕೆಯಲ್ಲಿ ಕುತುಬ್‌ಮಿನಾರ್, ಜಾಮೀಯಾ / ಮಸೀದಿ

ಮೊಗಲ ಕಾಲದ ಮೊಗಲ ಗಾರ್ಡನ್, ಆಗ್ರಾದ ತಾಜ್‌ಮಹಲ್, ಅಕ್ಬರ್ ಕಾಲದ ಪತೇಪುರ ಸಿಕ್ರಿ ಮೊದಲಾದವು ನಿರ್ಮಾಣವಾದವು. ಹೀಗೆ ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ಈ ಶೈಲಿ ಪ್ರಭಾವಸಿತು.

ಬಿಜಾಪುರ, ಗುಲ್ಬರ್ಗಾ, ಬೀದರ್, ರಾಯಚೂರು, ಮೊದಲಾದ ಸ್ಥಳಗಳಲ್ಲೂ ಮುಸ್ಲಿಮ್ ಶೈಲಿಯ ಮಸೀದಿ, ದರ್ಗಾ, ಈದ್ಗಾ ಮೈದಾನಗಳು, ಮದರಸಾಗಳು, ನಿರ್ಮಾಣ ಮಾಡಿರುವ ಹಿನ್ನೆಲೆ ಸ್ಮರಣೀಯವಾದದ್ದು. ಹಿಂದೂ-ಮುಸ್ಲಿಮ್ ವಾಸ್ತು ಶೈಲಿಯ ಲಕ್ಷಣಗಳ ಮಿಶ್ರಣದಿಂದ ಹೊಸ ಶೈಲಿ ಉಗಮವಾಯಿತು. ಇದರಂತೆ ಜನಜೀವನದಲ್ಲಿಯೂ ಕೂಡ ಹಿಂದೂ-ಮುಸ್ಲಿಮ್ ಒಂದೇ ಎಂಬ ಭಾವನೆ ಮೊದಲಿನಿಂದಲೂ ಸಾರಿಕೊಂಡು ಬಂದಿರುವುದು ಈ ವಾಸ್ತುಶೈಲಿಯ ಹಿನ್ನಲೆಯಲ್ಲಿ ತಿಳಿಯಬಹುದಾಗಿದೆ.

ವಿಜಯನಗರದ ಶೈಲಿಯೊಂದಿಗೆ ಮುಸ್ಲಿಮ್ ವಾಸ್ತುಶೈಲಿಯ ಬೆಳೆದು ಬಂದ ಬಗೆಯನ್ನು ಮತ್ತು ಪ್ರಭಾವವನ್ನು ಇಲ್ಲಿ ವಿಶೇಷವಾಗುತ್ತದೆ. ವಾಸ್ತುಶೈಲಿಯ, ವಿಧಾನ ಶಿಲ್ಪಿಗಳು ವಾಸ್ತು ತಜ್ಞರು ತಂತ್ರಜ್ಞರು, ಕುಸಿರಿ ಕೆಲಸಗಾರರು, ಬೋಗಿಗಳು ಇತರ ಕಟ್ಟಡಗಳ ನಿರ್ಮಾಪಕರಿಂದ ಹೊಸ ಹೊಸ ಶೈಲಿಗಳು ಚಾಲ್ತಿಗೆ ಬಂದವು. ಅಂಥವುಗಳಲ್ಲಿ ಇಂಡೋ-ಇಸ್ಲಾಮಿಕ್ ಶೈಲಿಯು ಒಂದು ಇದು ಮುಸ್ಲಿಮ್ ಶೈಲಿ ದಕ್ಷಿಣದ ಕುತೂಬಶಾಹಿಗಳು ಮತ್ತು ಆದಿಲ್‌ಶಾಹಿಗಳ ಆಶ್ರಯದಲ್ಲಿ ಇದು ಬೆಳೆದು ಬಂದಿದ್ದರಿಂದ ಇದು 'ಡೆಕ್ಕನ್ ಶೈಲಿ' ಎಂದಾಯಿತು. ಹಾಗೆಯೇ ಈ ಶೈಲಿಯಲ್ಲಿ ಭಾರತೀಯರ ಮತ್ತು ಪರ್ಷಿಯಾದ ವಾಸ್ತು ಶೈಲಿಯ ಉತ್ತಮ ಅಂಶಗಳು ಹಿತಮಿತವಾಗಿ ಬೆರೆತಿರುವುದರಿಂದ ಈ ಶೈಲಿಗೆ ಇಂಡೋ-ಸಾರ್ಸನಿಕ್ ಅಥವಾ ಇಂಡೋ-ಇಸ್ಲಾಮಿಕ್ ಶೈಲಿ" ಎಂದು ಹೆಸರೂ ಕೂಡಾ ಇದೆ.[೧]

ಉತ್ತರ ಭಾರತದಲ್ಲಿ ದೆಹಲಿ ಸುಲ್ತಾನರ ಅಧಿಪತ್ಯ ಸ್ಥಾಪನೆಯಾಗುವುದರೊಂದಿಗೆ ಭಾರತದಲ್ಲಿ ಇಸ್ಲಾಂ ಸಂಸ್ಕೃತಿ ಆರಂಭಗೊಂಡಿತು. ಈ ಸಂಸ್ಕೃತಿ ವಾಸ್ತುಶಿಲ್ಪದ ಮೇಲೆ ನೇರ ಪ್ರಭಾವ ಬೀರಿತು. ದೆಹಲಿ ಹಾಗೂ ಸುತ್ತಮುತ್ತಲ ಪ್ರದೇಶಗಳಲ್ಲೂ ಮುಸ್ಲಿಮ್ ಶೈಲಿಯ ಕಟ್ಟಡಗಳು ನಿರ್ಮಾಣಗೊಂಡವು. ಮಹಮದೀಯರು ನೆಲೆಸಿರುವಲ್ಲಿ ಮಸೀದಿಗಳು ಮತ್ತು ಸಮಾಧಿಗಳು ನಿರ್ಮಾಣವಾದವು. ಇವೆರಡೂ ಅವರ ಧಾರ್ಮಿಕ ಜೀವನದ ಪ್ರಮುಖ ಹಾಗೂ ಅನಿವಾರ್ಯ ಅವಶ್ಯಕತೆಗಳಾಗಿದ್ದವು. ಮಹಮ್ಮದ್ ತುಘಲಕ್‌ನ ಹಲವು ಯೋಜನೆಗಳು ಮುಸ್ಲಿಮ್ ಶೈಲಿಯನ್ನು ಉತ್ತರದಿಂದ ದಕ್ಷಿಣ ಭಾರತಕ್ಕೆ ತಂದವು. ದಿಲ್ಲಿಯಿಂದ ದೇವಗಿರಿಗೆ ರಾಜಧಾನಿ ಸ್ಥಳಾಂತರಗೊಂಡಾಗ ಮೊದಲ ಬಾರಿಗೆ ಮುಸ್ಲಿಮ್ ಶೈಲಿಯ ಕಟ್ಟಡಗಳು ದೇವಗಿರಿಯಲ್ಲಿ ನಿರ್ಮಾಣಗೊಂಡವು. ದೇವಗಿರಿ ದೌಲತ್‌ಬಾದ್ ಆಯಿತು. ಮಹಮ್ಮದನ ದುರಾಡಳಿತದ ವಿರುದ್ಧ ದಂಗೆ ಎದ್ದ ಅಮೀರರ ನಾಯಕ ಜಾಫರ್‌ಖಾನ್ ದಕ್ಷಿಣದಲ್ಲಿ ಬಹಮನಿ ರಾಜ್ಯ ಸ್ಥಾಪಿಸಿದ. ದೆಹಲಿ ಸುಲ್ತಾನರ ರಾಜಕೀಯ ಉತ್ತರಾಧಿಕಾರಿಗಳಾಗಿದ್ದ ಇವರು ಅವರ ವಾಸ್ತುಶೈಲಿಯನ್ನು ಇಡಿಯಾಗಿ ಸ್ವೀಕರಿಸಿದರು. ಬಹಮನಿಯ ಸುಲ್ತಾನರು ದಕ್ಷಿಣದಲ್ಲಿ ಮುಸ್ಲಿಮ್ ಶೈಲಿಯ ಆದ್ಯ ಪ್ರವರ್ತಕರಾದರು.

ಮುಸ್ಲಿಮ್ ಅಥವಾ ಡೆಕ್ಕನ್ ಶೈಲಿಯ ಬೆಳವಣಿಗೆಯಲ್ಲಿ ೪ ಹಂತಗಳನ್ನು ಗುರುತಿಸಬಹುದು. ಬಹಮನಿ ರಾಜ್ಯ ಸ್ಥಾಪನೆಯೊಂದಿಗೆ (೧೩೪೭) ಮೊದಲ ಹಂತ ಆರಂಭವಾಗುತ್ತದೆ. ಈ ಹಂತದಲ್ಲಿ ಬಹಮನಿಯ ಮೊದಲ ರಾಜಧಾನಿ ಕಲಬುರ್ಗಿಯಲ್ಲಿ ಕೋಟೆ, ಜಮೀಯಾ ಮಸೀದಿ, ಅರಮನೆ ಸಮಾಧಿಗಳು ನಿರ್ಮಾಣಗೊಂಡವು.

ಬಹಮನಿ ರಾಜಧಾನಿ ಬೀದರ್‌ಗೆ (೧೪೨೨) ಸ್ಥಳಾಂತರಗೊಂಡಾಗ ಈ ಶೈಲಿಯ ಎರಡನೆಯ ಹಂತ ಆರಂಭವಾಗುತ್ತದೆ. ೧೫೨೮ರಲ್ಲಿ ಬಹಮನಿ ರಾಜ್ಯ ಪತನಗೊಂಡು ೫ ಶಾಹಿ ರಾಜ್ಯಗಳಾಗಿ ತುಂಡಾದಾಗ ಕುತುಬ್‌ಶಾಹಿಗಳು ಡೆಕ್ಕನ್ ವಾಸ್ತುಶಿಲ್ಪಕ್ಕೆ ಆಶ್ರಯ ನೀಡಿದರು. ಹೀಗೆ ಕಲಬುರ್ಗಿಯಲ್ಲಿ ಹುಟ್ಟಿ, ಬೀದರ್‌ನಲ್ಲಿ ಅಭಿವೃದ್ಧಿ ಹೊಂದಿ ಗೋಲ್ಕೊಂಡದಲ್ಲಿ ಪರಿಪೂರ್ಣತೆ ಸಾಧಿಸಿದ ಈ ಶೈಲಿ ತನ್ನ ೪ನೆಯ ಹಂತದಲ್ಲಿ ವಿಜಾಪುರದ ಆದಿಲ್‌ಶಾಹಿಗಳ ಆಶ್ರಯದಲ್ಲಿ ತನ್ನ ವೈಭವದ ಪರಾಕಾಷ್ಠೆಯನ್ನು ತಲುಪಿತು.[೨]

## ಈ ಶೈಲಿಯ ಪ್ರಮುಖ ಲಕ್ಷಣಗಳು

೧. ಹಿಂದೂ-ಮುಸ್ಲಿಮ್ ವಾಸ್ತು ಅಂಶಗಳ ಚತುರ ಸಂಯೋಜನೆ

೨. ಕಟ್ಟಡದ ಆಕಾರ ಗಾತ್ರಗಳಿಗಿಂತ ಅಲಂಕರಣಕ್ಕೆ ಪ್ರಾಧಾನ್ಯತೆ

೩. ಕಮಾನು, ಗುಮ್ಮಟ, ಮೀನಾರ್‌ಗಳ ರಚನೆ

೪. ಗೆಚ್ಚು-ಗಾರೆಗಳ ಬಳಕೆ, ನಯವಾದ ಗಿಲಾಯಿ ಕೆಲಸ[೩]

## ೩.೧ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಲಕ್ಷಣಗಳು :

ಹೊಸದಾಗಿ ಬಂದವರು ಹೊಸ ಮಾಧ್ಯಮವನ್ನು ಹೊಸ ರಚನೆಯನ್ನು ಕಲೆಯ ಹೊಸ ಶಬ್ದಾವಳಿಯನ್ನು ತಮ್ಮೊಂದಿಗೆ ತಂದರು. ಇಸ್ಲಾಮಿಕ್ ಕಲೆಗೆ ಅದರದೇ ಆದ ವಿಶಿಷ್ಟ ಲಕ್ಷಣಗಳಿದ್ದವು. ಅದು ಒಂದು ನಿರ್ದಿಷ್ಟ ಕುಲದ ಅಥವಾ ಭೌಗೋಳಿಕ ಜನಸಮುದಾಯದ ಉತ್ಪನ್ನವಲ್ಲ ಅದು 'ಮೊರಾಕೋದಿಂದ ಇಂಡೋನೇಷಿ'ಯದವರೆಗಿನ ಸಮಸ್ತ ಇಸ್ಲಾಮಿಕ್ ಜನರ ಸೌಂದರ್ಯಭಿವ್ಯಕ್ತಿಯಾಗಿತ್ತು. ಕೊನೆಯಿಲ್ಲದಷ್ಟು ವೈವಿಧ್ಯತೆ ಅದರಲ್ಲಿತ್ತು. ಭಾರತೀಯ ಸಂಪ್ರದಾಯಿಕ ಕಲೆಗಳ ಸತ್ವವೂ ಅದಕ್ಕೆ ಸೇರಿಕೊಂಡು ಒಂದು ಮೋಹಕವಾದ ಆಕಾರವನ್ನು ತಳೆಯಿತು. ಇಸ್ಲಾಮಿಕ್ ಕಲೆ ಅಲಂಕಾರಿಕವಾದದ್ದು. ವ್ಯಕ್ತಿನಿಷ್ಠವಾದದ್ದು ಮತ್ತು ಸೂಕ್ಷ್ಮವಾದದ್ದು. ಮಾನವಾಕೃತಿಯ ಚಿತ್ರಣವನ್ನು ಅನುಮತಿಸಿಲ್ಲವಾದ್ದರಿಂದ ಮುಸ್ಲಿಮ್ ಕಲೆಯು ರೇಖಾಗಣಿತಿಯ ಹಾಗೂ ಸಸ್ಯರೂಪ ಚಿತ್ರಗಳಲ್ಲೂ ಬಳ್ಳಿಗಳ ಬಳಕೆ ಪ್ರಧಾನವಾಗಿ ಪರಿಣಮಿಸಿತು. ಒಂದು ಹೂ ಅಥವಾ ಎಲೆಯು ಇನ್ನೊಂದರಿಂದ ಮಾಡುತ್ತಾ ಕೊನೆಯೇ ಇಲ್ಲದೇ ಬಳ್ಳಿಯಾಗಿ ವಿವಿಧ ವಿನ್ಯಾಸಗಳನ್ನು ರೂಪಿಸುತ್ತದೆ. ಅದು ಭಾರತೀಯ ಕಲೆಯಷ್ಟು ಸಮೃದ್ಧವೂ

ಜಟಿಲವಾದುದು ಅಲ್ಲ. ಆದರೆ ಅದರ ಸರಳತೆ, ಮಾಧುರ್ಯ ಮತ್ತು ಸಹಜತೆಗಳು, ಚಿತ್ರಿತ ಶಕ್ತಿ ಮತ್ತು ಪ್ರಮಾಣಬದ್ಧತೆಗಳೊಂದಿಗೆ ಸೇರಿ ಇಡೀ ರಚನೆಯು ವಿಶಿಷ್ಟವಾಗಿ ಆಕರ್ಷಕವಾಯಿತು."

ಇಸ್ಲಾಮಿಕ್ ಕಲೆಯು ವ್ಯಕ್ತಿನಿಷ್ಠವಾದದ್ದು ಆರಾಧನಾಮಂದಿರಗಳಾದ ಮಸೀದಿಗಳ ನಿರ್ಮಾಣದಲ್ಲಿ ಅದರ ಮುಖ್ಯ ರಚನಾ ವಿನ್ಯಾಸವನ್ನು ನೋಡಬಹುದು. ಈ ಕಟ್ಟಡಗಳು ಪರಮೋನ್ನತಭವ್ಯ ಭಗವತ್ ಶಕ್ತಿಯ ಅಮೂರ್ತ ನಿರಾಕಾರ ಪರಿಕಲ್ಪನೆಗೆ ಮೀಸಲಾದವು. ಮಸೀದಿಯ ಮೂಲ ವಿನ್ಯಾಸವು ಮುಸ್ಲಿಮ್ ಜಗತ್ತಿನಾದ್ಯಂತ ಒಂದೇ ಆಗಿದೆ. ಕಮಾನು, ಗುಮ್ಮಟ, ಸ್ತಂಭಗೋಪುರ, ಮಿರಾಬ್ ಈದ್ಗಾ ಮೈದಾನ ಎಲ್ಲ ಕಡೆಯೂ ಒಂದೇ ಬಗೆಯವುಗಳನ್ನು ನಿರ್ಮಿಸಲು ಅಲಂಕಾರ ವಿನ್ಯಾಸಗಳನ್ನು ಬಳಸಲಾಗಿದೆ. ಅಮೃತಶಿಲೆಯೋ ಗ್ರಾನೈಟ್ ಶಿಲೆಯೋ, ಮರವೋ, ಮೊಸಾಯಿಕ್ ಹಲಗೆಗಳೋ ಯಾವ ವಸ್ತುಗಳನ್ನು ಉಪಯೋಗಿಸಿ ಕಟ್ಟಲಾಗಿದೆ. ಈ ವಿಷಯಗಳಲ್ಲಿ ಕಲೆಯ ವೈಶಿಷ್ಟ್ಯ ಹುದುಗಿದೆ. ಇಸ್ಲಾಮಿಕ್ ಕಲೆ ಬಹು ವರ್ಣರಂಜಿತವಾದದ್ದು ಆದರೆ ವರ್ಣಗಳನ್ನು ಸೌಂದರ್ಯ ಮತ್ತು ಪ್ರಮಾಣಬದ್ಧತೆಗಳ ಭಾವನೆಯನ್ನು ಹೆಚ್ಚಿಸುವ ರೀತಿಯಲ್ಲಿ ಆರಿಸಲಾಗುತ್ತದೆ."

## ಇಸ್ಲಾಮಿಕ್ ಶಿಲ್ಪಕಲೆಯ ಲಕ್ಷಣಗಳು

೧. **ಮಸೀದಿ:** ಮಸೀದಿ ಎಂಬ ಪದವು 'ಮಜ್ಜೀದ್' ಎಂಬ ಅರಬ್ಬಿ ಪದದ ಅಪಭ್ರಂಶರೂಪ ದಂಡವತ್ ಪ್ರಣಾಮ ಮಾಡುವ ಸ್ಥಳ ಎಂದು ಅರ್ಥ.

ಸರ್ವಸಾಮಾನ್ಯವಾಗಿ ಮಸೀದಿಯು ಚಾವಣಿಯಿಲ್ಲದೇ ಸಮಾಂತರ ಚತುರ್ಭುಜಾಕಾರದ ವಿಶಾಲಾಂಕಣದ ರೂಪದಲ್ಲಿರುತ್ತದೆ. ಅದರ ಮಧ್ಯದಲ್ಲಿ ಧ್ಯಾನಕ್ಕೆ ಬರುವ ಮುನ್ನ ಕೈಕಾಲು ಮುಖಗಳನ್ನು ತೊಳೆದುಕೊಳ್ಳಲು ಒಂದು (ಹೌಜ್) ಕಾರಂಜಿಯಾಗಲಿ, ಕೊಳವಾಗಲಿ ಇರುತ್ತದೆ. ಅದರ ಸುತ್ತಲೂ ಕಂಬಗಳಿರುತ್ತವೆ. ಅಂಗಳದ ಅಕ್ಕಪಕ್ಕಗಳಲ್ಲಿ ಕೈಸಾಲೆ, ಧ್ಯಾನಾರ್ಥವಾಗಿ ದೊಡ್ಡದಾದ ಹಜಾರ.

೨. **ಮಿಹಿರಾಬ್:** ಪವಿತ್ರ ಸ್ಥಳವಾದ ಮಸೀದಿಯ ಹಜಾರದ ಪಶ್ಚಿಮ ದಿಕ್ಕಿನ ಗೋಡೆಯಲ್ಲಿ ಮೆಕ್ಕಾಭಿಮುಖವಾದ ಮಿಹಿರಾಬ್ ಇಸ್ಲಾಂ ಧರ್ಮ ತತ್ವದ ಸಂಕೇತ ಮಹಮ್ಮದೀಯ ವಸ್ತು ರೀತಿಯ ಪ್ರಧಾನ ವೈಶಿಷ್ಟ್ಯ ಭಗವಂತನು ಒಬ್ಬನೇ ಮಹಮ್ಮದನ್ನು ಪ್ರವಾದಿ ಎಂಬ ತತ್ವವನ್ನು ಈ ಮಿಹಿರಬ್ ಸಂಕೇತಿಸುವುದಾಗಿದೆ.

೩. **ಮಿಂಬರ್:** ಖಾಜಿಯು ಆಸೀನವಾಗುವುದಕ್ಕೆ ಮಿಂಬರ್ ಎಂಬ ಕಟ್ಟೆ ಉಪದೇಶ ವೇದಿಕೆ, ಕಟ್ಟಡದ ಎರಡೂ ತುದಿಗಳಲ್ಲಿ ದುಂಡಗಾದ ಇಲ್ಲವೇ ಅಷ್ಟಕೋನಾಕಾರದ ಎತ್ತರದ ಬುರುಜು ಇವು ಮಸೀದಿಯ ಮುಖ್ಯಭಾಗಗಳು.

೪. **ಮಿನಾರ್:** ಗೋಪುರ ದೀಪದ ಮನೆ, ಸ್ತಂಭಗೋಪುರ

೫. **ಗುಮ್ಮಟ ಅಥವಾ ಗುಂಬಜ್:** ಕಟ್ಟಡದ ಮೇಲ್ಭಾಗದಲ್ಲಿ ದುಂಡಾಕಾರ ಅಥವಾ ವೃತ್ತಾಕಾರದಲ್ಲಿರುವ ಸುಂದರವಾದ ರಚನೆ.

೬. **ಕಮಾನುಗಳು:** ಸರ್ವೇಸಾಮಾನ್ಯವಾಗಿ ಕಮಾನು ಬಿಲ್ಲಿನಂತೆ ಬಗ್ಗಿರುತ್ತವೆ. ಕೋನಾಕೃತಿಗಳಲ್ಲಿ, ಸದಾ ಕಮಾನುಗಳಿವೆ.

೭. **ಚಜ್ಜ (ಕಾರ್ನೀಸ್):** ಚಜ್ಜ ಮತ್ತು ಅದಕ್ಕೆ ಆಧಾರವಾಗಿರುವ ಅಲಂಕೃತ ಚಿಕ್ಕ ಕಂಬಗಳು. ಚಜ್ಜ ಎಂದರೆ ಗೋಡೆಗಳ ಮೇಲ್ಭಾಗದಲ್ಲಿ ಮುಂದಕ್ಕೆ ಚಾಚಿಕೊಂಡಿರುವ ಭಾಗಗಳು.

೮. **ಬಾಲಚಂದ್ರ ಲಾಂಛನ:** ಗುಮ್ಮಟ ಹಾಗೂ ಮಿನಾರ್‌ಗಳ ಅಂಚಿನಲ್ಲಿ ಸ್ಥಾಪಿಸುತ್ತಾರೆ.

೯. **ಗೋರಿ:** ಗೋರಿಯನ್ನು ಮುಸ್ಲಿಮರು 'ರೂಜ' ಎನ್ನುತ್ತಾರೆ. ಸ್ವಪ್ರತಿಷ್ಠೆಗಾಗಿ ಈ ಸಮಾಧಿ ಅಥವಾ ಗೋರಿಗಳನ್ನು ನಿರ್ಮಿಸಿದ್ದಾರೆ.

೧೦. **ಜರೈ:** ಗುಮ್ಮಟಕ್ಕಾಗಿ ದುಂಡಾಕಾರದಲ್ಲಿರುವ ಸಮಾಧಿಯ ಸ್ಥಳ.

೧೧. **ದಿವಾನಿ ಆಮ್:** ಜನರ ಕುಂದು ಕೊರತೆ ನಿವಾರಿಸುವ ಸ್ಥಳ. (ಸಾರ್ವಜನಿಕ)

೧೨. **ದಿವಾನಿ ಕಾಸ್:** ರಾಜನ ಆಪ್ತ ಕಾರ್ಯಗಳನ್ನು ನಡೆಸುವ ಕಾರ್ಯಾಲಯ.

೧೩. **ಬ್ಯಾಟಲ್‌ಮೆಂಟ್:** ಕೋಟೆಯ ಗೋಡೆಯ ಮೇಲ್ಭಾಗದಲ್ಲಿರುವ ಕಂಡಿಗಳಿರುವ ಕೈಪಿಡಿ ಗೋಡೆ.

೧೪. **ಬ್ರ್ಯಾಕೆಟ್:** ಕಮಾನಿನ ಆಸರೆಗಾಗಿ ಗೋಡೆಯಿಂದ ಮುಂದಕ್ಕೆ ಚಾಚಿಕೊಂಡಿರುವ ಸಮತಲದ ಗೋಡೆ.

೧೫. **ಕಸ್ಪಡ್ ಆರ್ಚ್:** ಚಿಕ್ಕ ಚಿಕ್ಕ ರೀತಿಯಲ್ಲಿ ಭಾಗಿದ ಕಮಾನುಗಳು.

೧೬. **ಸ್ಕ್ವಿಂಚ್:** ಗುಮ್ಮಟದ ಕೆಳಭಾಗ ಒಳಭಾಗದಲ್ಲಿ ಮೂಲೆಯಲ್ಲಿರುವ ಕಮಾನು.

೧೭. **ಲೀವಾನ್:** ಮಧ್ಯಾಂಗಣದ ಸುತ್ತಲೂ ಮೇಲ್ಛಾವಣಿ ಇರುವ ಕಟ್ಟಡ.

೧೮. **ಮದರಸಾ:** ಶಾಲೆ, ಪ್ರಕೃತಿ, ತತ್ವಶಾಸ್ತ್ರ ಬೋಧಿಸುವ ಸ್ಥಳ.

೧೯. **ಪಿನ್ಸ್ ಕೋರ್ಟ್:** ಗೋಡೆಗಳಿಂದ ಅಥವಾ ಕಟ್ಟಡಗಳಿಂದ ಸುತ್ತುವರಿದಿರುವ ಪ್ರದೇಶ.

೨೦. **ಹುಜ್ರ:** ಕೊಠಡಿಯಾಕಾರದಲ್ಲಿದ್ದು ಕಾಬ್ರಾ ಸ್ಥಾನವಾಗಿರುತ್ತದೆ.

**೨೧. ಕಪುಲ:** ಗುಮ್ಮಟದ ಕಾಂಡ ಅಥವಾ ಬುಡ.

**೨೨. ಕಸ್ಪಿಡ್ ಆರ್ಚ್:** ಚಿಕ್ಕ ಚಿಕ್ಕ ರೀತಿಯಲ್ಲಿ ಬಾಗಿದ ಕಮಾನುಗಳು.

**೨೩. ಗುಮ್ಮಟ (Dome)** - ಕಟ್ಟಡದ ಮೇಲ್ಭಾಗದಲ್ಲಿ ದುಂಡಾಕಾರದಲ್ಲಿರುವ ರಚನೆ.

**೨೪. ಫಕೇಡ್:** ಕಟ್ಟಡದ ಮುಖಭಾಗ ಮತ್ತು ಮುಂಭಾಗ.

**೨೫. ಲೀವಾನ್:** ಮಧ್ಯಾಂಗಣದ ಸುತ್ತಲೂ ಮೇಲ್ಛಾವಣಿ ಇರುವ ಕಟ್ಟಡ.

**೨೬. ರೊರಾಕೋ (Rococo)** - ಇದು ಆಭರಣ ಅಲಂಕಾರಕ್ಕೆ ಸಂಬಂಧಿಸಿದಾಗಿರುತ್ತದೆ. ಇದೊಂದು ಅಲಂಕಾರಿಕ ಶೈಲಿ.

**೨೭. ಈದ್ಗಾ:** ಮುಸ್ಲಿಮರು ಹಬ್ಬ ಹರಿದಿನಗಳಲ್ಲಿ ಎಲ್ಲರೂ ಒಟ್ಟಾಗಿ ಸೇರಿ ಸಾಮೂಹಿಕವಾಗಿ ಪ್ರಾರ್ಥನೆ ಸಲ್ಲಿಸುವುದಕೋಸ್ಕರ ಮಾಡಿಕೊಂಡ ಸ್ಥಳವೇ ಈದ್ಗಾ.

## ೩.೨ ದಕ್ಷಿಣ ಭಾರತ :

೯ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೂ ಅನೇಕ ಪ್ರಾದೇಶಿಕ ಶೈಲಿಗಳು ಬೆಳೆದು ಬಂದವು. ತುಘಲಕ್ ಸಂತತಿಯ ಕಾಲದಲ್ಲಿ ಪ್ರಾದೇಶಿಕ ವಲಯದಲ್ಲಿ ಕೆಲವು ಸ್ವತಂತ್ರ್ಯ ಸಂತತಿಗಳು ಬೆಳೆದು ಬಂದವು. ಮೊದಲಿಗೆ ದಖ್ಖನ್ ಮತ್ತು ಬೆಂಗಾಲ್ ಶೈಲಿಯು ೧೪ನೆಯ ಶತಮಾನದ ಮಧ್ಯ ಭಾಗದಲ್ಲಿ ಬೆಳೆದು ಬಂದವು.[೬]

ಈ ಪ್ರಾಂತೀಯ ವಾಸ್ತುಶಿಲ್ಪಗಳಲ್ಲಿ ಮುಲ್ತಾನ್, ಗುಜರಾತ್, ಬಂಗಾಳ ಶೈಲಿಗಳು ಪ್ರಮುಖವಾದವುಗಳಾಗಿವೆ. ಈ ಎಲ್ಲಾ ಶೈಲಿಗಳನ್ನು ಪ್ರಾಂತೀಯ ರಾಜ್ಯಗಳಲ್ಲಿ ಆರಂಭವಾದ ಶೈಲಿಯನ್ನು ಪ್ರಾಂತೀಯ ಶೈಲಿಯೆಂದು ಕರೆಯಾಲಾಗಿದೆ. ದಕ್ಷಿಣದಲ್ಲಿ ದಖ್ಖನ್ ಶೈಲಿಯು ಆರಂಭವಾಯಿತು. ಬಹಮನಿ ಸುಲ್ತಾನರುಗಳು ತಮ್ಮ ಸ್ವತಂತ್ರ ರಾಜ್ಯಗಳನ್ನು ಸ್ಥಾಪಿಸಿಕೊಂಡು ಈ ಶೈಲಿಯನ್ನು ದಖ್ಖನ್ನಿನಲ್ಲಿ ಬೆಳೆಸಿದರು.

## ೧. ಮುಲ್ತಾನ್ ಶೈಲಿ :

ಮುಲ್ತಾನ್ ಶೈಲಿಯ ಕಾಲವನ್ನು ೯ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೂ ನೋಡಬಹುದು. ದೆಹಲಿಯ ಸುಲ್ತಾನರು ಯಾವ ರೀತಿ ಕಟ್ಟಡಗಳನ್ನು ಕಟ್ಟಿರುವ ರೀತಿಯನ್ನೇ ಅಳವಡಿಸಿಕೊಂಡು. ಪ್ರಾಂತೀಯ ರಾಜರುಗಳು ಕಟ್ಟಡಗಳನ್ನು ಕಟ್ಟುತ್ತಿದ್ದರು. ಇದನ್ನು ಸ್ಥಳೀಯ Local Architecture ಅಥವಾ ಪ್ರಾಂತೀಯ ವಾಸ್ತುಶಿಲ್ಪ ಕಲೆಯೆಂದು ಕರೆಯುತ್ತಾರೆ.

'ಮುಲ್ತಾನ್ ಶೈಲಿ ಮತ್ತು ಲಾಹೋರ್ ಶೈಲಿ' ಈ ಎರಡು ಶೈಲಿಗಳು ಪರ್ಶಿಯನ್ನರ ಪ್ರಭಾವದಿಂದ ಉದ್ಭವಗೊಂಡವು.

**೨. ಬಂಗಾಳ ಶೈಲಿ :**

೧೩ನೆಯ ಶತಮಾನದಿಂದ ಆರಂಭವಾಗಿ ೧೬ನೆಯ ಶತಮಾನದವರೆಗೂ ಈ ಶೈಲಿಯನ್ನು ಕಾಣಬಹುದು. ಇವರ ಶೈಲಿಯಲ್ಲಿ ಹೊರಗಡೆಯಿಂದ ಕಟ್ಟಡಗಳನ್ನು ನೋಡಿದಾಗ ಗೋರಿಗಳಂತೆ ಕಂಡರೂ ಹಿಂದೂ ದೇವಾಲಯಗಳಂತೆ ಕಟ್ಟಿರುತ್ತಾರೆ. ಇವರ ಕಟ್ಟಡಗಳಲ್ಲಿ ಹೆಚ್ಚಾಗಿ ಇಟ್ಟಿಗೆಯನ್ನು ಬಳಸಿದ್ದಾರೆ. ಕಲ್ಲನ್ನು ಕಡಿಮೆ ರೀತಿಯಲ್ಲಿ ಉಪಯೋಗಿಸಿದ್ದಾರೆ. ಬಂಗಾಳ ಶೈಲಿಯ ವಿಶಿಷ್ಟವೆಂದರೆ ಚಿಕ್ಕ ಕಂಬಗಳ ಮೇಲೆ ಮೊನೆಯಕಾರದ ಕಮಾನುಗಳು ಮತ್ತು ಮುಸ್ಲಿಮರು ಅಳವಡಿಸಿಕೊಂಡಿರುವ ಹಿಂದೂ ದೇವಾಲಯಗಳ ಶೈಲಿ ಗೋಡೆಗಳ ಮೇಲ್ಭಾಗದಲ್ಲಿ ವಕ್ರರೇಖೆಯುಳ್ಳ ಕಮಾನುಗಳು ಸುಂದರವಾದ ಚಿತ್ರಕಲೆಯನ್ನು ನೋಡಬಹುದು.

**೩. ಗುಜರಾತ್ ಶೈಲಿ :**

ಪ್ರಾಂತೀಯ ವಾಸ್ತುಶಿಲ್ಪ ಕಲೆಗಳಲ್ಲಿ ಗುಜರಾತ್ ಶೈಲಿಯು ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪದಂತೆ ಅತ್ಯಂತ ದೊಡ್ಡದು ಅತೀ ಮುಖ್ಯವು ಆಗಿದೆ. ಗುಜರಾತನ್ನು ದೆಹಲಿಯ ಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿ ೧೨೯೭ರಲ್ಲಿ ಜಯಿಸಿ ಆಳಿದನು. ೧೫ನೆಯ ಶತಮಾನದ ವೇಳೆಗೆ ಭವ್ಯಸ್ಮಾರಕಗಳು ಇಲ್ಲಿ ನಿರ್ಮಾಣವಾದವು. ಈ ಶೈಲಿಯು ಪ್ರಸಿದ್ಧಿಗೆ ಬರಲು ಕುಶಲಕರ್ಮಿಗಳು ಕಲೆಯಲ್ಲಿ ಹೆಚ್ಚು ಪ್ರಸಿದ್ಧಿ ಹೊಂದಿದವರಾಗಿದ್ದರು. ಹಿಂದೂ ಮತ್ತು ಮುಸ್ಲಿಮ್ ಶೈಲಿಗಳ ಲಕ್ಷಣಗಳು ಈ ಶೈಲಿಯಲ್ಲಿ ಮಿಳಿತಗೊಂಡಿದೆ. ಪ್ರಾರಂಭದಲ್ಲಿ ಹಿಂದೂ ಕುಶಲ ಕರ್ಮಿಗಳನ್ನು ಕರೆಸಿ ಕಟ್ಟಡಗಳನ್ನು ಕಟ್ಟಿದ್ದಾರೆ.

**೪. ದಖ್ಖನ್ ಶೈಲಿ :**

ಪ್ರಾಂತೀಯ ವಾಸ್ತುಶಿಲ್ಪದಲ್ಲಿ ಕಂಡುಬರುವುದೇ ಇಂಡೋ-ಇಸ್ಲಾಮಿಕ್ ಶೈಲಿ. ಇದು ದಖ್ಖನ್ ಶೈಲಿಯಲ್ಲಿ ಕಂಡುಬುರುತ್ತದೆ. ಪಾಶ್ಚಿಮಾತ್ಯ ಪರ್ಶಿಯನ್ ಪ್ರಭಾವದ ಒಂದು ಹೊಸ ಶೈಲಿ ಉಗಮವಾಯಿತು. ದಖ್ಖನ್ನಿನ ಶಿಲ್ಪವು ಪರ್ಶಿಯನ್ ಮತ್ತು ಹಿಂದೂ ವಾಸ್ತುಶಿಲ್ಪದ ಶೈಲಿಯ ಸಮ್ಮಿಶ್ರವಾಯಿತೆಂದು ಹೇಳಬಹುದು. ಪರ್ಶಿಯನ್ನರಿಗೆ ಪರ್ಶಿಯಾದಲ್ಲಿ ಭದ್ರತೆಯಿಲ್ಲದ ಕಾರಣ ೧೩ನೆಯ ಶತಮಾನದಲ್ಲಿ ಪಶ್ಚಿಮದಿಂದ ಹೊರಟು ದಕ್ಷಿಣಕ್ಕೆ ಬಂದರು. ಇವರು ವಾಸ್ತುಶಿಲ್ಪ ರಚನೆಯಲ್ಲಿ ತೊಡಗಿದ್ದರಿಂದ ತೊಡಗಿದ್ದರಿಂದ ಪರ್ಶಿಯನ್ ಶೈಲಿಯ ಪ್ರಭಾವ ದಖನ್ ಶೈಲಿಯಲ್ಲಿ ಕಾಣಬಹುದು.

ಮುಸ್ಲಿಮ್ ಶೈಲಿ ಅಥವಾ ದಖ್ಖನ್ ಶೈಲಿಯನ್ನು ದಕ್ಷಿಣ ಭಾರತಕ್ಕೆ ಮೊದಲು ಪರಿಚಯಿಸಿದ್ದು ಬಹಮನಿ ರಾಜ್ಯ. ಈ ವಂಶಕ್ಕೆ ಸೇರಿದ ಸುಲ್ತಾನರು ಪ್ರಾರ್ಥನೆಗಾಗಿ ಮಸೀದಿಗಳನ್ನು ನಿರ್ಮಿಸಿದರು.

## ೪. ವಿಜಯನಗರ ಕಾಲದಲ್ಲಿ ಇಂಡೋ-ಇಸ್ಲಾಮಿಕ್ ಶಿಲ್ಪಕಲೆಯ ಪ್ರಭಾವ :

ವಿಜಯನಗರದ ಆಸ್ಥಾನಕ್ಕೆ ಸಂಬಂಧಿಸಿದ ಎಲ್ಲ ಯೋಜನೆಗಳು ಹೆಚ್ಚು ಕಡಿಮೆ ದಕ್ಷಿಣ ಭಾರತದಲ್ಲಿ ಬಹಮನಿ ಸಂಪ್ರದಾಯದಂತೆ ಬೆಳೆದು ಬಂದ ಇಸ್ಲಾಂ ಶಿಲ್ಪಕಲೆಯನ್ನು ಹೊಲುತ್ತವೆ. ಜ್ಯಾಮಿತಿಯ ರಚನೆಯಲ್ಲಿ ಒಂದು ಅಥವಾ ಹಲವಾರು ಗುಮ್ಮಟಗಳನ್ನು ಮತ್ತು ಗೂಡುಗಳನ್ನು ಹೊಂದಿರುವ ಕೋಣೆಗಳು ದಕ್ಷಿಣದ ಇಸ್ಲಾಂ ಶಿಲ್ಪಕಲೆಯ ಅತಿ ಮುಖ್ಯ ಅಂಶವಾಗಿದೆ. ಯೋಜನೆಗಳು ಬಹುತೇಕ ಸಮಮಿತಿಯಲ್ಲಿದ್ದು ವಿಭಾಗಗಳನ್ನು ಅಥವಾ ದೊಡ್ಡ ಕೋಣೆಯನ್ನು ಅಥವಾ ತೆರೆದ ಸ್ಥಳಗಳನ್ನು ಹೊಂದಿವೆ. ಮಸೀದಿ ಮತ್ತು ಗುಮ್ಮಟಗಳ ನಂತರ ಬಂದ ಚೌಕಾಕಾರದ ಮತ್ತು ಅಷ್ಟಭುಜಾಕೃತಿಯ ಯೋಜನೆಗಳು ಕೂಡ ಬಹು ವಿಭಾಗದ ವ್ಯವಸ್ಥೆಯನ್ನು ಹೋಲುತ್ತವೆ.

**ಉದಾ:** ಆನೆಲಾಯದ ರಚನೆಯಲ್ಲಿ ನಿಖರವಾಗಿ ತಿಳಿದು ಬರುವುದೇನೆಂದರೆ ಇಸ್ಲಾಂ ಗುಮ್ಮಟಗಳ ಮಸೀದಿ ಕೋಣೆಗಳ ರಚನೆಯನ್ನು ಇಲ್ಲಿ ಪುನರಾವರ್ತಿಸಿ ಹನ್ನೊಂದು ಒಂದೇ ತೆರನಾದ ರಚನೆಗಳ ಸಾಲಿದೆ. ಇಂಥದೇ ಒಂದು ರಚನೆಯನ್ನು ಗುಲ್ಬರ್ಗಾದಲ್ಲಿ `ಶಹಕಮಾಲ' ಮುಜರಾಬ್ ದರ್ಗಾದಲ್ಲಿ ಕುದುರೆಗಳಿಗಾಗಿ ನಿರ್ಮಿಸಲಾಗಿದೆ. ಇದರಲ್ಲಿ ಹತ್ತು ವಿಭಾಗಗಳಿದ್ದು, ಇದನ್ನು ಹದಿನಾಲ್ಕನೇ ಶತಮಾನದಲ್ಲಿ ನಿರ್ಮಿಸಲಾಗಿದೆ. ವಿಜಯನಗರದಲ್ಲಿರುವ ಒಂಭತ್ತು ಗುಮ್ಮಟಗಳ ಮಂಟಪದ ರಚನೆಯನ್ನು ಗುಲ್ಬರ್ಗಾದ ಶಹಬಝಾರ್ ಮಸೀದಿಯಲ್ಲಿ (ಹದಿನಾಲ್ಕನೆಯ ಶತಮಾನ) ಅಥವಾ ನಂತರದ ಜಾಮಿ ಮಸೀದಿಯಲ್ಲಿ ಕಾಣಬಹುದು. ಈ ಮಸೀದಿಯಲ್ಲಿ ಚೌಕಾಕಾರದ ಮತ್ತು ಆಯತಾಕಾರದ ವಿಭಾಗಗಳು (bay) ಗುಮ್ಮಟವನ್ನುಹೊಂದಿರುವ ಛತ್ತುಗಳು ಮತ್ತು ಗೂಡುಗಳನ್ನು ಕಾಣಬಹುದು. ವಿಜಯನಗರದಲ್ಲಿ ಕಂಡುಬರುವ ದ್ವಾರಬಾಗಿಲು (Gateway) ಹದಿನೈದನೆಯ ಶತಮಾನದ ಗುಲ್ಬರ್ಗಾದ ಶೇಖ್ ಸಿರಾಜ್ ಅಲ್ ಜುನೈದಿ ದರ್ಗಾದಲ್ಲಿ ಕಾಣಬಹುದು.[೧೦]

ಎರಡು ಅಂತಸ್ತುಗಳುಳ್ಳ ಅಷ್ಟಭುಜದ ಮಂಟಪ (vi/2) ಮತ್ತು ಅಷ್ಟಭುಜಾಕೃತಿಯ ಸ್ನಾನಗೃಹ ಇಸ್ಲಾಂ ಶಿಲ್ಪಕಲೆಯನ್ನು ಹೊಂದಿವೆ. ಪೆನುಗೊಂಡದಲ್ಲಿರುವ ಅಷ್ಟಭುಜಾಕೃತಿಯ ಕಾವಲುಗೋಪುರದಲ್ಲಿಯೂ ಸಹ ಇದೇ ಯೋಜನೆಯನ್ನು ಕಾಣಬಹುದಾಗಿದೆ.

ವಿಜಯನಗರದ ಎಲ್ಲಾ ಸ್ಮಾರಕಗಳನ್ನು ಸಂಪೂರ್ಣವಾಗಿ ಕಲ್ಲನ್ನು ಉಪಯೋಗಿಸಿ ಅದರಲ್ಲಿ ದಪ್ಪವಾದ ಗಚ್ಚ ಗಾರೆ (Mortar)ನ್ನು ಸಣ್ಣ ಸಣ್ಣ ಕಲ್ಲುಗಳನ್ನು ಅದರಲ್ಲಿ ಜೋಡಿಸಿ ನಂತರ ಪ್ಲಾಸ್ಟರ್‌ನಿಂದ ನಿರ್ಮಿಸಲಾಗಿದೆ. ಆದ್ದರಿಂದ ಈ ಸ್ಮಾರಗಳು ಉಳಿದ ಎಲ್ಲಾ ಸ್ಮಾರಕಗಳಿಗಿಂತ ಹೆಚ್ಚು ಕಾಲ ಉಳಿದುಬಂದಿವೆ.

ಗಟ್ಟಿಯಾದ ಗ್ರಾನೈಟ್‌ನಿಂದ ನಿರ್ಮಿಸಿರುವ ಈ ಪದ್ಧತಿಯು ಕೂಡ ದಖ್ಖನ್ನಿನಲ್ಲಿ ಇಸ್ಲಾಂ ಶಿಲ್ಪಕಲೆಯಿಂದಲೇ ಆರಂಭಗೊಂಡಿದೆ. ಬಹಮನಿಯ ಪರಧಿಯಲ್ಲಿ ಬರುವ ಎಲ್ಲ ಸ್ಮಾರಕಗಳು ಇದೇ

ತಂತ್ರವನ್ನು ಅಳವಡಿಸಿಕೊಂಡಿವೆ. ಮುಸ್ಲಿಮರಿಗಿಂತ ಮುಂಚೆ ಇಲ್ಲಿ (ಈ ಭಾಗದಲ್ಲಿ) ಈ ತಂತ್ರವನ್ನು ಕಾಣಲಾಗುವುದಿಲ್ಲ. ಇದಕ್ಕೆ ಒಂದು ಅಪವಾದ ಎಂದರೆ ಹಳೆಯ ಕಲ್ಲಿನ ಕಂಬಗಳು ತೊಲೆಗಳು ಮತ್ತು ಕಲ್ಲುಬಂಡೆಗಳನ್ನು ಉಪಯೋಗಿಸಿಕೊಂಡು ನಿರ್ಮಿಸಲಾದ ಇಸ್ಲಾಂನ ಸ್ಮಾರಕಗಳು ಹದಿನಾಲ್ಕನೇ ಶತಮಾನದ ಆರಂಭದಲ್ಲಿ ನಿರ್ಮಾಣಗೊಂಡ ಕರಿಮುದ್ದಿನ್ ಮಸೀದಿ ಈ ತೆರನಾದ ಸ್ಮಾರಕಕ್ಕೆ ಉದಾಹರಣೆ. ವಿಜಯನಗರದ ಸ್ಮಾರಕಗಳಲ್ಲಿ ಗೋಡೆಗಳ ಮತ್ತು ಅವುಗಳಲ್ಲಿ ಸೇರುವ ಸ್ಥಳದಲ್ಲಿ ನಿಲ್ಲಿಸಲಾದ ಕಂಬಗಳ, ವಿಭಾಗಗಳ ಮತ್ತು ಗುಮ್ಮಟ ಅಥವಾ ಗೂಡುಗಳ ಉಪಯೋಗ ಮೇಲಿಂದ ಮೇಲೆ ಕಂಡುಬರುತ್ತವೆ. ಅಲ್ಲಲ್ಲಿ ಪ್ರಕ್ಷೇಪಗಳನ್ನು ಕಮಾನುಗಳ ಸಹಿತ ನಿರ್ಮಿಸಲಾಗಿದೆ. ಗೋಡೆಗಳಲ್ಲಿ ಪ್ರಾರ್ಥನಾ ಗೂಡುಗಳನ್ನು ಕಾಣಬಹುದು. ಎಲ್ಲಾ ಕಮಾನುಗಳು ಒಂದೇ ತೆರನಾಗಿವೆ.

ವಿಜಯನಗರದ ಸ್ಮಾರಕಗಳಲ್ಲಿ ಗೋಡೆಗಳಲ್ಲಿ ಮತ್ತು ಅವುಗಳಲ್ಲಿ ಸೇರುವ ಸ್ಥಳದಲ್ಲಿ ನಿಲ್ಲಿಸಲಾದ ಕಂಬಗಳು ವಿಭಾಗಗಳ ಮತ್ತು ಗುಮ್ಮಟ ಅಥವಾ ಗೂಡುಗಳ ಉಪಯೋಗ ಮೇಲಿಂದ ಮೇಲೆ ಕಂಡುಬರುತ್ತವೆ. ಅಲ್ಲಲ್ಲಿ ಪ್ರಕ್ಷೇಪಗಳನ್ನು ಕಮಾನುಗಳ ಸಹಿತ ನಿರ್ಮಿಸಲಾಗಿದೆ. ಗೋಡೆಗಳಲ್ಲಿ ಪ್ರಾರ್ಥನಾ ಗೂಡುಗಳನ್ನು ಕಾಣಬಹುದು. ಎಲ್ಲ ಕಮಾನುಗಳು ಒಂದೇ ತೆರನಾಗಿವೆ.

ಈ ಸ್ತಂಭಗಳು ಮತ್ತು ಕಮಾನುಗಳು ಸಹ ಬಹಮನಿಯ ಶಿಲ್ಪಕಲೆಯೊಂದಿಗೆ ಬೆಸೆದುಕೊಂಡಿದೆ. ಗುಲ್ಬರ್ಗಾದ ಶಾಹಬಝಾರ್ ಮಸೀದಿಯಲ್ಲಿ ಇಂತದ್ದೇ ಸ್ತಂಭಗಳನ್ನು, ಕಮಾನುಗಳನ್ನು ಕಾಣಬಹುದಾಗಿದೆ. ಶಾಹಫಿರೋಜನ (೧೩೯೭-೧೪೨೨)ರ ಕಾಲದಲ್ಲಿ ಮುಂಭಾಗವನ್ನು ಅಲಂಕಾರಗೊಳಿಸುವ ಶಿಲ್ಪಾಕಲಾ ಪದ್ಧತಿ ಆರಂಭಗೊಂಡಿತು. ಈ ಲಕ್ಷಣವನ್ನು ಗುಲ್ಬರ್ಗಾದ ಹಜರತ ಗೇಸುದರ್ಗಾ ಮತ್ತು ಫಿರೋಜನ ಗೋರಿಯಲ್ಲಿ ಕಾಣಬಹುದಾಗಿದೆ. ಬೀದರ್ ಮತ್ತು ಗುಲ್ಬರ್ಗಾದ ಜಾಮಿ ಮಸೀದಿಯಲ್ಲಿ (ಹದಿನಾರನೆಯ ಶತಮಾನ) ಒಳಾಂಗಣದ ರಚನೆಗಳನ್ನು ಕಮಾನು, ಗುಮ್ಮಟ ಮೊದಲಾವುಗಳನ್ನು ಕಾಣಬಹುದು. ಶಾಹಫಿರೋಜ ಸುಲ್ತಾನನ ಸಮಾಧಿ ಗುಲ್ಬರ್ಗಾದ ಜಾಮಿ ಮಸೀದಿ ಲಂಗರ್ ಕಿ ಮಸೀದಿ ಮೊದಲಾದವು ತೆರವುಗಳ ಲಕ್ಷಣವನ್ನು ಹೊಂದಿವೆ. ವೃತ್ತಾಕಾರದ ರಚನೆಗಳನ್ನು ಹೊಂದಿವೆ.

ವಿಜಯನಗರದ ಸ್ಮಾರಕಗಳ ಗೋಡೆಗಳು ಮೇಲೆ ಹೋದಂತೆ ಗೋಪುರಾಕೃತಿಯನ್ನು ಹೊಂದುತ್ತವೆ. ಇದೇ ಲಕ್ಷಣವು ಬಹಮನಿ ಸ್ಮಾರಕಗಳಲ್ಲಿಯೂ ಸಹ ಕಾಣಬಹುದು. ಆದರೆ ಬಹಮನಿ ಕಲಾಪದ್ಧತಿ ಬೆಳೆದುಬಂದಂತೆ ಈ ಲಕ್ಷಣ ಮಾಯವಾಗತೊಡಗಿತು. ಮುಂಭಾಗವನ್ನು ತೆರವುಗಳೊಂದಿಗೆ ಅಂದಗೊಳಿಸುವುದು ಹಿಂಭಾಗದಲ್ಲಿಯೂ ಕಮಾನುಗಳನ್ನು ಇಡುವುದು ಮುಸ್ಲಿಂ ಶಿಲ್ಪಕಲೆಯೂ ಬಹಳ ಹಿಂದಿನಿಂದಲೂ ನಡೆದುಬಂದಿದೆ.[೧೧]

ವಿಜಯನಗರದ ಸ್ಮಾರಕಗಳು ಎತ್ತರದ ಗೋಡೆಗಳನ್ನು ಮತ್ತು ಅವುಗಳ ಮೇಲೆ ಕೆತ್ತನೆಯ ಅಲಂಕಾರಗಳನ್ನು ಕಾಣಬಹುದು. ಕೆಲವು ಸರಳವಾಗಿ ಮತ್ತೆ ಕೆಲವು ಸಂಕೀರ್ಣವಾಗಿವೆ. ಅಲ್ಲಲ್ಲಿ

ಅಲಂಕಾರದ ಪಟ್ಟಿಯನ್ನು ಸಹ ಮಾಡಲಾಗಿದೆ. ಇದು ಕೂಡ ವೃತ್ತಾಕಾರದ ಉಂಗುರದ ರಚನೆ ಬಹುಮನಿ ಶಿಲ್ಪಕಲೆಯಲ್ಲಿ ಕಂಡುಬಂದಿದೆ. ಈ ಮೋತಿಫ (Motif)ಗಳ ರಚನೆಯು ಸಹ ಮೂಲತಃ ಬಹಮನಿಯದ್ದು. ಅರಸರ ಸಮಾಧಿಗಳಲ್ಲಿ ಶಹಬಝೂರ್ ಮಸೀದಿ (ಗುಲ್ಬರ್ಗಾ) ಮತ್ತು ಗುಲ್ಬರ್ಗಾದ ಲಂಗರ್ ಕಿ ಮಸೀದಿಯಲ್ಲಿ ಈ ರಚನೆಯನ್ನು ಕಾಣಬಹುದು ಈ ಗೋಡೆಗಳ ಮೇಲೆ ವಿವಿಧ ರೀತಿಯ ಅಲಂಕಾರಗಳಿವೆ.

ವಿಜಯನಗರದ ಸ್ಮಾರಕಗಳಲ್ಲಿರುವ 'ಗುಮ್ಮಟಗಳು' ಕೂಡ ಬಹುಮನಿ ಶಿಲ್ಪಕಲೆಯಿಂದ ಬಂದಿದ್ದು ಹದಿನಾಲ್ಕು ಮತ್ತು ಹದಿನೈದನೆಯ ಶತಮಾನದಲ್ಲಿ ನಿರ್ಮಾಣಗೊಂಡ ಗುಲ್ಬರ್ಗಾ ಮತ್ತು ಗೋಲ್ಕಂಡಾ (Golcanda)ದ ಸಮಾಧಿಗಳಲ್ಲಿ ಚಪ್ಪಟೆಯಾಕಾರದ ವಿವಿಧ ಗುಮ್ಮಟಗಳನ್ನು ಕಾಣಬಹುದು. ಆದರೆ ನಂತರ ಈ ಲಕ್ಷಣ ದಖ್ಖನ್ನಿನ ಇಸ್ಲಾಂ ಶಿಲ್ಪಕಲೆಯಲ್ಲಿ ಕಂಡುಬರದೆ ಹೆಚ್ಚು ವೃತ್ತಾಕಾರದ ಗುಮ್ಮಟಗಳು ಕಂಡುಬಂದವು. ಕೊಳವೆಯಾಕಾರದ ಗುಮ್ಮಟ ಬುಡದ ಮೇಲೆ ಗುಮ್ಮಟವನ್ನು ನಿರ್ಮಿಸುವುದು ಈ ಲಕ್ಷಣ ಅರಸರ ಅರಮನೆ ಆವರಣದ ಈ ಈಶಾನ್ಯದ ಪ್ರವೇಶ ದ್ವಾರದಲ್ಲಿ ಮಾತ್ರ (ವಿಜಯನಗರ) ಕಂಡುಬಂದಿದೆ. ಇಂತಹ ಲಕ್ಷಣ ೧೪೭೨ರಲ್ಲಿ ನಿರ್ಮಾಣಗೊಂಡ ಬೀದರ್‌ನ ಮಹಮ್ಮದ್ ಗವಾನನ ಮದರಸಾದಲ್ಲಿ ಕಂಡುಬಂದಿದೆ.[೧೧] ಪೆನುಗೊಂಡ ಮತ್ತು ಚಂದ್ರಗಿರಿಯ ಸ್ಮಾರಕಗಳಲ್ಲಿ ಕಂಡುಬಂದ ಪರಸ್ಪರ ಛೇದವಾಗುವಂತೆ ನಿರ್ಮಿಸಿದ ಕಮಾನುಗಳು ತುಂಬಾ ವಿಶೇಷವಾಗಿದೆ ಈ ಲಕ್ಷಣ ಮಾತ್ರ ಬಹುಮನಿಯಲ್ಲಿ ಈ ಮೊದಲು ಕಂಡುಬಂದಿಲ್ಲ. ೧೫೭೬ರಲ್ಲಿ ಮೊದಲ ಬಾರಿಗೆ ಈ ಲಕ್ಷಣವನ್ನು ಜಾಮಿ ಮಸೀದಿಯಲ್ಲಿ ಬಳಸಿಕೊಳ್ಳಲಾಯಿತು. ನಂತರ ಬಿಜಾಪುರ, ಗೋಲಗುಂಬಜ್‌ನಲ್ಲಿ (೧೭ನೆಯ ಶತಮಾನ) ಬಳಸಿಕೊಳ್ಳಲಾಯಿತು. ಈ ಲಕ್ಷಣ ಮಾತ್ರ ಬಿಜಾಪುರದ ಮೇಲೆ ನೇರ ಪ್ರಭಾವಬೀರಿದೆ.

ಗುಮ್ಮಟಗಳ ಅಲಂಕಾರ ಸಹ ಬಹಮನಿಯಿಂದ ಪಡೆದುಕೊಳ್ಳಲಾಗಿದೆ. ಸಣ್ಣ ಅಲಂಕಾರವಿದ್ದ ಕಮಲದ ಹೂಗಳು ಮೊದಲಾದವು. ಒಳಭಾಗವು ಕೂಡ ಈ ಪ್ರಭಾವಕ್ಕೆ ಒಳಗಾಗಿದೆ. ಸುಲ್ತಾನ ಫಿರೋಜನ ಸಮಾಧಿಯಲ್ಲಿ (ಎರಡು ಕೋಣೆ) ಈ ಲಕ್ಷಣಗಳಿವೆ.

ಗುಮ್ಮಟ ಸಹಿತ ಗೂಡುಗಳು ಸಹ ಬಹಮನಿಯ ಲಕ್ಷಣವನ್ನು ಹೊಂದಿವೆ. ಗುಲ್ಬರ್ಗಾ ಮತ್ತು ಫಿರೋಜಾಬಾದ್ ಹಲವಾರು ಶಿಥಿಲಗೊಂಡ ಸ್ಮಾರಕಗಳಲ್ಲಿ ಈ ಲಕ್ಷಣಗಳನ್ನು ಕಾಣಬಹುದು. ಪಿರಾಮಿಡ್ ಆಕಾರದ ಗೂಡುಗಳು ಕಾವಲು ದ್ವಾರದ ಮನೆಯಲ್ಲಿ ಕಾಣಬಹುದು. ಪ್ಲಾಸ್ಟರ್ ನಿರ್ವಹಣೆ ಸಹ ದಖ್ಖನ್ನಿನ ಇಸ್ಲಾಮಿಕ್ ಲಕ್ಷಣಗಳಲ್ಲಿ ಒಂದಾಗಿದೆ. ಲಂಗರ್ ಕಿ ಮಸೀದಿ ಶಹಕಮಲ ಮುಜರ್ರದನ ದರ್ಗಾಗಳಲ್ಲಿ ಈ ಲಕ್ಷಣ ಕಂಡುಬರುತ್ತದೆ. ವಿಜಯನಗರದ ವಾಸ್ತುಶಿಲ್ಪದ ಶ್ರೀಮಂತಿಕೆಗೆ ದಕ್ಷಿಣದ ಬಹಮನಿ ವಾಸ್ತು ಶಿಲ್ಪಕಲೆಯ ಲಕ್ಷಣಗಳ ಪ್ರಭಾವವು ಇಲ್ಲಿ ಅದ್ಭುತ ಹಾಗೂ ಮನಮೋಹಕವಾಗಿರುವುದು ಸ್ಮರಣೀಯ.[೧೨]

## ಟಿಪ್ಪಣಿಗಳು

೧. ಅಳವಂಡಿ ಲಕ್ಷ್ಮಣ, **ಇತಿಹಾಸ ಕೋಶ ೨,** ಪುಟ ೫೭-೬೯

೨. ಅದೇ, ಪುಟ ೭೦-೭೧

೩. ಅದೇ, ಪುಟ ೯೦-೯೧

೪. ಪ್ರೊ ಬಿ.ಷೇಕ್ ಅಲಿ, **ಕರ್ನಾಟಕ ಚರಿತ್ರೆ, ಸಂಪುಟ ೪,** ಪುಟ ೩೦೩-೩೦೪

೫. ಅದೇ, ಪುಟ

೬. ಜಿಯಾ-ಉದ್-ದೀನ್-ದೇಸಾಯಿ, **ಇಂಡೋ-ಇಸ್ಲಾಮಿಕ್ ಆರ್ಕಿಟೆಕ್ಚರ್,** ಪುಟ ೧೧

೭. ಅದೇ, ಪುಟ ೧೨

೮. ಅದೇ, ಪುಟ ೧೩

೯. ಜಾರ್ಜ್ ಮಿಶೆಲ್, **ವಿಜಯನಗರ ಕೋರ್ಟ್‌ಲಿ ಸ್ಟೈಲ್,** ಪುಟ ೪೮

೧೦. ಅದೇ, ಪುಟ ೪೯

೧೧. ಅದೇ, ಪುಟ ೫೦

೧೨. ಅದೇ ಪುಟ ೭೫

# ಅಧ್ಯಾಯ ನಾಲ್ಕು

## ಹಂಪಿ ಪರಿಸರದ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಸ್ಮಾರಕಗಳು

ಹಂಪಿ

ಕಡ್ಡಿರಾಮಪುರ

ಹೊಸಪೇಟೆ

ಕಮಲಾಪುರ

ಮಲಪನಗುಡಿ

ಆನೆಗೊಂದಿ

ಇತ್ಯಾದಿ

# ಅಧ್ಯಾಯ ನಾಲ್ಕು

## ಹಂಪಿ ಪರಿಸರದ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಸ್ಮಾರಕಗಳು

ವಿಜಯನಗರ ಕಾಲದಲ್ಲಿ ಇಸ್ಲಾಮಿಕ್ ಶೈಲಿಯ ಶಿಲ್ಪಕಲೆಗೆ ಪ್ರೋತ್ಸಾಹವಿತ್ತು. ಈ ಕಲೆಯನ್ನು ಉಲ್ಲೇಖಿಸುವ ಮುಖ್ಯ ಉದ್ದೇಶವೇನೆಂದರೆ, ವಿಜಯನಗರದಲ್ಲಿ ಇಸ್ಲಾಂ ಶಿಲ್ಪಕಲೆ ನೆಲೆಸಿತ್ತು ಎಂಬುದಕ್ಕೆ ಹಂಪಿ ಪರಿಸರದ ಆಸುಪಾಸಿನಲ್ಲಿ ಹಲವಾರು ಗುಮ್ಮಟಗಳ ನಿರ್ಮಾಣವಾಗಿರುವುದೇ ಸಾಕ್ಷಿಯಾಗಿದೆ. ಗುಲ್ಬರ್ಗಾ ಮತ್ತು ವಿಜಯನಗರ ಪ್ರದೇಶಗಳಲ್ಲಿನ ಗುಮ್ಮಟಗಳಲ್ಲಿ ಕಂಡುಬರುವ ತಾಂತ್ರಿಕ ಮತ್ತು ರಚನಾತ್ಮಕ ಹೋಲಿಕೆಗಳನ್ನು ಗಮನಿಸಿದಾಗ ತಿಳಿಯುವ ಅಂಶವೆಂದರೆ, ಮುಸ್ಲಿಮರ ರಾಜಧಾನಿಯಲ್ಲಿ ಕೆಲಸ ಮಾಡಿದವರೆ, ವಿಜಯನಗರದಲ್ಲಿಯೂ ಸಹ ನಿರ್ಮಾಣ ಕಾರ್ಯವನ್ನು ಕೈಗೊಂಡರು ಎಂಬುದು. ಅವರನ್ನು ಗುಲ್ಬರ್ಗಾ ಮತ್ತು ಇತರ ಪ್ರದೇಶಗಳಿಂದ ವಿಜಯನಗರದಲ್ಲಿ ಶ್ರೀಮಂತ ಮತ್ತು ಪ್ರಭಾವಿ ಮುಸ್ಲಿಂ ಕಟ್ಟಡ ನಿರ್ಮಾಣಕ್ಕಾಗಿ ಇಲ್ಲಿಗೆ ಕರೆತರಲಾಗಿದೆ. ಆದರೆ ಈ ಅಂಶವನ್ನು ಬಿಂಬಿಸುವ ಯಾವುದೇ ಪುರಾವೆಗಳು ದುರಾದೃಷ್ಟವಶಾತ್ ದೊರೆಯುವುದಿಲ್ಲ. ಈ ನಿಟ್ಟಿನಲ್ಲಿರುವ ಒಂದೇ ಒಂದು ಅಂಶ ಎಂದರೆ ಹಂಪಿ ಪರಿಸರದಲ್ಲಿ ಕಂಡುಬರುವ ಸ್ಮಾರಕಗಳು.[೧]

ರಾಜಧಾನಿಯ ಕೇಂದ್ರಸ್ಥಾನದಿಂದ ಉತ್ತರಕ್ಕೆ ಸರಿಸುಮಾರು ೧.೫ ಕಿ.ಮೀ ದೂರದಲ್ಲಿ ನಾಲ್ಕು ಬೇರೆ ಬೇರೆ ಸ್ಥಳಗಳಲ್ಲಿ ಹಲವಾರು ಮಸೀದಿಗಳು, ಗುಮ್ಮಟಗಳು ಮತ್ತು ಗೋರಿ ಸ್ಮಶಾನಗಳು ಕಂಡುಬಂದಿವೆ.

೧. ಕೋಟೆಯ ಆವರಣದ ಒಳಗಡೆಯ ನಗರ ಪ್ರದೇಶದಲ್ಲಿ.

೨. ಕಡ್ಡಿರಾಮಪುರ ಗ್ರಾಮದ ಹೊರಗಡೆ ಸುಮಾರು ೨ ಕಿ.ಮೀ ದೂರದಲ್ಲಿ ಕೇಂದ್ರದಿಂದ ಪಶ್ಚಿಮಕ್ಕೆ

೩. ವಿಜಯನಗರದ ರಾಜಧಾನಿಯಾದ ಹಂಪಿಯಲ್ಲಿ ಕಂಡುಬರುವ ಸ್ಮಾರಕಗಳು

೪. ಹೊಸಪೇಟೆ ನಗರದ ವಾಯವ್ಯಕ್ಕೆ ಸುಮಾರು ೧೦ ಕಿ.ಮೀ ದೂರದಲ್ಲಿ ವಿಜಯನಗರದ ವ್ಯಾಪ್ತಿಯಲ್ಲಿ ಕಂಡುಬರುವ ಸ್ಮಾರಕಗಳು

ಆದರೆ ಈ ಮೇಲೆ ತಿಳಿಸಿದ ನಾಲ್ಕು ಬೇರೆ ಬೇರೆ ಸ್ಥಳಗಳನ್ನು ಅವಲೋಕಿಸಿದಾಗ ಮೊದಲನೆಯ ಸ್ಥಳದಲ್ಲಿಮಾತ್ರ ಕೇವಲ ಒಂದು ಮಸೀದಿ ದೊರೆತಿದ್ದು ಉಳಿದ ಕಡೆಗಳಲ್ಲಿ ಕೇವಲ ಗೋರಿಗಳು ಮತ್ತು ಸಮಾಧಿ ಕಲ್ಲುಗಳು (Grave Sotnes) ಮಾತ್ರ ದೊರೆತಿವೆ.

ಆಸ್ಥಾನಕ್ಕೆ ಸಂಬಂಧಿಸಿದ ಪ್ರಮುಖ ಸ್ಮಾರಕಗಳು ವಿಜಯನಗರದ ರಾಜಧಾನಿಯ ರಾಜರ ಅರಮನೆಯ ಸುತ್ತಮುತ್ತಲಿನ ಆವರಣಗಳಲ್ಲಿ ಕಾಣಬಹುದಾಗಿದೆ. ಆವರಣ ಒಂದರ ಪೂರ್ವದಲ್ಲಿ (ಮಧ್ಯೆ) ಒಂದು ದ್ವಾರದ (Gateway) ಅವಶೇಷಗಳಿವೆ. ಆವರಣ ೬ರಲ್ಲಿ ಇನ್ನು ಎರಡು ಕಟ್ಟಡಗಳಿವೆ. ಎರಡು ಅಂತಸ್ತುಗಳುಳ್ಳ ಅಷ್ಟಭುಜಾಕೃತಿಯ ಮಂಟಪ ಮತ್ತು ಅದರ ಹತ್ತಿರ ಇರುವ ಒಂಭತ್ತು ಗುಮ್ಮಟಗಳ ಮಂಟಪ, ಅವುಗಳ ಹತ್ತಿರವಿರುವ ಆವರಣ ೭ರಲ್ಲಿ ಬಹುಗುಮ್ಮಟಗಳ ಕಾವಲುಗೋಪುರ, ವಾಯವ್ಯದ ಗೋಡೆಯ ಮೇಲೆ ನಿರ್ಮಿಸಲ್ಪಟ್ಟಿದೆ. ಇದೇ ಸಮುಚ್ಚಯ (Exclore)ದಲ್ಲಿ ಒಂದು ಶಿಥಿಲಗೊಂಡ ಕಟ್ಟಡ ಇದೆ ಮತ್ತು ದ್ವಾರಬಾಗಿಲಿನ (Gateway) ಮನೆ ಆವರಣ ೮ರ ಈಶಾನ್ಯದಲ್ಲಿ ಇನ್ನೊಂದು ಶಿಥಿಲಗೊಂಡ ಕಟ್ಟಡವನ್ನು ಕಾಣಬಹುದಾಗಿದೆ.

ಆವರಣ ೧೪ನ್ನು ನಿಜವಾಗಿಯೂ ಜನಾನಾ (Zenana) ಎಂಬುದಾಗಿ ಗುರುತಿಸಲಾಗಿದೆ. ಆದರೆ ಇದನ್ನು ಪುಷ್ಟೀಕರಿಸಲು ನಮಗೆ ಯಾವುದೇ ಐತಿಹಾಸಿಕ ಅಥವಾ ಪ್ರಾಚ್ಯಶಾಸ್ತ್ರದ ದಾಖಲೆಗಳು ದೊರೆಯುವುದಿಲ್ಲ. ಇಲ್ಲಿ ಹಲವಾರು ರಾಜರ ಆಸ್ಥಾನಕ್ಕೆ ಸಂಬಂಧಿಸಿದ ಹಲವಾರು ಸ್ಮಾರಕಗಳಿವೆ. ಎರಡು ಅಂತಸ್ತುಗಳ ಮಂಟಪ (xiv/I) ಇದನ್ನು ಜನಪ್ರಿಯವಾಗಿ ಕಮಲಮಹಲ್ ಎಂದು ಗುರುತಿಸಲಾಗಿದೆ. ಇದರ ವಾಯವ್ಯಕ್ಕೆ ಮತ್ತೊಂದು ಆಯತಾಕಾರದ ಕಟ್ಟಡವಿದೆ. ಆದರೆ ಅದರ ಛತ್ತು ಮಾತ್ರ ತ್ರಿಭುಜಾಕೃತಿಯಲ್ಲಿದೆ (xiv/4). ಈ ಆವರಣದ ಸುತ್ತಲಿನ ಎತ್ತರದ ರಕ್ಷಣ ಗೋಡೆಯ ಮೇಲೆ ಮೂರು ಗೋಪುರಗಳನ್ನು ನಿರ್ಮಿಸಲಾಗಿದೆ. ಆವರಣದ ೧೪ಕ್ಕೆ ಹೊಂದಿಕೊಂಡಂತೆ ಉತ್ತರದಲ್ಲಿ ದ್ವಾರಬಾಗಿಲಿನ ಮನೆ (Gate House) ಇದೆ. ಪೂರ್ವದಲ್ಲಿ ಆಯತಾಕಾರದ ತೆರೆದ ಮಂಟಪವಿದೆ. ಆವರಣದ ಎದುರಿನಲ್ಲಿ ಜಗತ್ ಪ್ರಸಿದ್ಧ ಆನೆಲಾಯ ಮತ್ತು ಆಯತಾಕಾರದ ರಚನೆ ಇವುಗಳಿಂದ ಸ್ವಲ್ಪ ದೂರದಲ್ಲಿ ಉತ್ತರದಲ್ಲಿ ಚೌಕಕಾರದ ಜಲಮಂಟಪ ಇದೆ. ಇಂತಹ ಅನೇಕ ರಚನೆಗಳನ್ನು ಗಮನಿಸಿದಾಗ

ಆಯತಾಕಾರದ ಕಾರಂಜಿ (Fountain) ಮತ್ತು ಆಯತಾಕಾರದ ಸ್ನಾನಗೃಹಗಳು ಪೂರ್ವದಲ್ಲಿವೆ. ಶಿಥಿಲಗೊಂಡ ಮತ್ತೊಂದು ಮಂಟಪ ಈ ಸ್ಮಾರಕದ ಹತ್ತಿರವಿದೆ. ಒಟ್ಟಿನಲ್ಲಿ ಹಂಪಿ, ಕಡ್ಡಿರಾಮಪುರ, ಹೊಸಪೇಟೆಯಲ್ಲಿ ಈ ಸ್ಮಾರಕಗಳನ್ನು ಕಾಣಬಹುದು.[೨]

### ೧. ರಾಜಧಾನಿಯ ಕೇಂದ್ರಸ್ಥಾನದಿಂದ ಉತ್ತರಕ್ಕೆ ಇರುವ ಮಸೀದಿ

ಆಯತಾಕಾರದಲ್ಲಿರುವ ಈ ಕಟ್ಟಡವನ್ನು ಇತ್ತೀಚೆಗೆ ಪುನರ್ ನಿರ್ಮಿಸಲಾಗಿದೆ. ಇದು ಎತ್ತರದ ಸ್ಥಳದಲ್ಲಿ ನಿರ್ಮಾಣಗೊಂಡಿದೆ. ನಾಲ್ಕು ದಿಕ್ಕಿನಲ್ಲಿಯೂ ಗೋಡೆಯನ್ನು ನಿರ್ಮಿಸಲಾಗಿದೆ. ಉತ್ತರಕ್ಕೆ ಮತ್ತು ಪೂರ್ವಕ್ಕೆ ಕಟ್ಟಡಕ್ಕೆ ಹತ್ತಲು ಮೆಟ್ಟಿಲನ್ನು ನಿರ್ಮಿಸಲಾಗಿದೆ. ಮೆಟ್ಟಿಲುಗಳನ್ನು ಕಲ್ಲಿನಿಂದ ನಿರ್ಮಿಸಲಾಗಿದೆ. ಈ ಕಟ್ಟಡದಲ್ಲಿ ಹಲವಾರು ಮಣ್ಣಿನ ಉಂಗುರಾಕಾರವನ್ನು ಹೋಲುವ ರಚನೆ ಕಂಡುಬಂದಿದೆ. ಬಹುಶಃ ನೀರು ಸಂಗ್ರಹಿಸಲು ಬಳಸಿರಬಹುದು.

ಈ ಸ್ಮಾರಕವು ಪೂರ್ವದಲ್ಲಿ ತೆರೆದುಕೊಂಡಿದ್ದು, ಉಳಿದ ಮೂರು ಭಾಗಗಳಲ್ಲಿ ಮುಚ್ಚಲ್ಪಟ್ಟಿದೆ. ೪ ಮತ್ತು ೩ ಸಾಲುಗಳಲ್ಲಿ ಕಂಬಗಳನ್ನು ಜೋಡಿಸಲಾಗಿದೆ. ಪ್ರತಿ ಕಂಬವು ಗೋಡೆಗೆ ಇದಿರಾಗಿ ನಿಂತಿದೆ. ಪಶ್ಚಿಮ ಗೋಡೆಯ ಮಧ್ಯಭಾಗದಲ್ಲಿ ಪ್ರಾರ್ಥನಾಗೂಡನ್ನು (ಮಿಹರಬ್ ನಿಚೆ) ನಿರ್ಮಿಸಲಾಗಿದೆ.

**ಹೊರಭಾಗ :**

ಕಟ್ಟಡವನ್ನು ಸರಳವಾದ ಮೂರು ಸ್ತರದ ಬುನಾದಿಯ ಮೇಲೆ ನಿರ್ಮಿಸಲಾಗಿದೆ. ಪೂರ್ವ ಭಾಗದಲ್ಲಿ ಕಮಾನುಗಳ ತೆರೆದುಕೊಂಡಿದ್ದು ಅವುಗಳು ಮೇಲ್ಚಾವಣಿ (Roof) ಯ ತೊಲೆಗಳಿಗೆ ಆಸರೆ ನೀಡಿವೆ. ಈ ಕಮಾನುಗಳು ಇಳಿಜಾರಿನಲ್ಲಿ ನಿರ್ಮಾಣಗೊಂಡಿವೆ. ಒಂದು ತೊಲೆಯ ಮೇಲೆ ಈ ಕಟ್ಟಡವನ್ನು ನಿರ್ಮಿಸಿದವರ ಹೆಸರು ಮತ್ತು ದಿನಾಂಕವನ್ನು ಬರೆಯಲಾಗಿದೆ.

**ಒಳಭಾಗ :**

ಕಟ್ಟಡದ ಒಳಭಾಗದಲ್ಲಿ ಕಂಬಗಳು ಚೌಕಕಾರದಲ್ಲಿವೆ. ಮೇಲಿನ ಕಲ್ಲುಗಳನ್ನು ಅಷ್ಟಭುಜಾಕೃತಿಯಾಗಿ ಎರಡು ಹಂತಗಳಲ್ಲಿ ವೃತ್ತಾಕಾರವಾಗಿ ಬಳಸಲಾಗಿದೆ. ಕಂಬಗಳು ಸಾಪಾಗಿವೆ. ಯಾವುದೇ ಚಿತ್ರಗಳನ್ನು ಹೊಂದಿಲ್ಲ. ಪ್ರಾರ್ಥನೆ ಕಟ್ಟೆಯ ಹಿಂದೆ ಮೇಲ್ಭಾಗದಲ್ಲಿ ಆಳವಾದ ಗೂಡನ್ನು ನಿರ್ಮಿಸಲಾಗಿದೆ. ಒಂದೇ ಹಾಸುಗಲ್ಲಿನಲ್ಲಿ ಕೆತ್ತಲಾದ ಎರಡು ಭಾಗಗಳಿವೆ. ಗೋಡೆಯ ಮೇಲೆ ಸಿಮೆಂಟಿನ ಗಿಲಾವು (Plaster) ಬಿಟ್ಟರೆ ಬೇರೆ ಯಾವ ಕೆತ್ತನೆಯನ್ನು ಮಾಡಿಲ್ಲ.[೩]

### ೨. ರಾಜಧಾನಿಯ ಕೇಂದ್ರದಿಂದ ಉತ್ತರಕ್ಕೆ ಇರುವ ಮಸೀದಿ.

ಈ ಕಟ್ಟಡವು ಶಿಥಿಲಾವಸ್ಥೆಯಿದ್ದು ದೊಡ್ಡ ಸ್ಮಶಾನದಿಂದ ಸುತ್ತುವರಿಯಲ್ಪಟ್ಟಿದೆ. ಇಲ್ಲಿ ಹಲವಾರು ಸಮಾಧಿಕಲ್ಲುಗಳು ಮತ್ತು ಒಂದು ಬಾವಿ ಇದೆ.

ಈ ಸ್ಮಾರಕವನ್ನು ಪೂರ್ವದಿಂದ ಪಶ್ಚಿಮಕ್ಕೆ ಲಂಬವಾಗಿ ನಿರ್ಮಿಸಲಾಗಿದೆ. ಪಶ್ಚಿಮದ ಕೊನೆಯಲ್ಲಿ ಗೂಡನ್ನು ನಿರ್ಮಿಸಲಾಗಿದೆ. ಅದರ ಒಂದು ಭಾಗವನ್ನು ಈಗಲೂ ನೋಡಬಹುದು. ಹಲವಾರು ಕಂಬಗಳನ್ನು ನಿರ್ಮಿಸಲಾಗಿದ. ಆದರೆ ಕೆಲವು ಕಂಬಗಳು ಈಗಾಗಲೇ ಬಿದ್ದುಹೋಗಿವೆ. ಈ ರಚನೆಯ ಮಧ್ಯಭಾಗದ ಹಜಾರವನ್ನು (Hall) ತೋರಿಸುತ್ತದೆ. ಪೂರ್ವಭಾಗವು ಸಾಕಷ್ಟು ವಿಶಾಲವಾಗಿದೆ. ಕಂಬಗಳು ಛಾವಣಿಯ ತೊಲೆಯನ್ನು ಎತ್ತಿಹಿಡಿದಿವೆ. ಪೂರ್ವದ ಮಧ್ಯದಲ್ಲಿ ಅರ್ಧ ಬಿದ್ದು ಹೋಗಿರುವ ಬಾಗಿಲು ಇದೆ. ಹೊರಭಾಗದಲ್ಲಿ ನಾಲ್ಕು ಕಂಬಗಳಿವೆ.

**ಒಳರಚನೆ :**

ಒಳಗಿನ ಮಧ್ಯಭಾಗದಲ್ಲಿ ಪ್ರಾರ್ಥನೆಯ ಗೂಡನ್ನು ನಿರ್ಮಿಸಲಾಗಿದೆ. ಈ ಗೂಡಿನ ಮೇಲ್ಭಾಗವು ಪಶ್ಚಿಮದಲ್ಲಿ ಬಿದ್ದು ಹೋಗಿದೆ. ಕಂಬಗಳು ಅಷ್ಟಾಕೃತಿಯ ರಚನೆಯನ್ನು ಹೊಂದಿವೆ. ಹಜಾರದೊಳಗಿನ ಕೆಲವು ಕಂಬಗಳು ಮತ್ತು ಕಮಾನುಗಳು ಬಿದ್ದು ಹೋಗಿವೆ.[೮]

## ೩. ರಾಜಧಾನಿಯ ಕೇಂದ್ರದಿಂದ ಉತ್ತರಕ್ಕೆ ಇರುವ ಗುಮ್ಮಟಾಕಾರದ ಸಮಾಧಿ

ಈ ಮೇಲೆ ಹೇಳಿದ ಮಸೀದಿಯ ಪಕ್ಕದಲ್ಲಿಯೇ ಸುಮಾರು ೨೩ ಮೀ ದೂರದಲ್ಲಿದೆ. ಈ ಸಮಾಧಿಯು ಮಸೀದಿಯ ಎದುರಿನಲ್ಲಿದೆ.

ಸಮಮಿತಿಯಲ್ಲಿ ನಿರ್ಮಿಸಲ್ಪಟ್ಟ ಈ ಕಟ್ಟಡವು ಒಂದೇ ಚೌಕಕಾರದ ಕೋಣೆಯನ್ನು ಹೊಂದಿದೆ. ಎರಡು ಪಾರ್ಶ್ವದ ಮಧ್ಯಭಾಗದಲ್ಲಿ ಹೊರಗಡೆ ಮತ್ತು ಒಳಗಡೆ ದೊಡ್ಡ ಮತ್ತು ಸಣ್ಣ ಕಮಾನುಗಳನ್ನು ನಿರ್ಮಿಸಲಾಗಿದೆ.

**ಹೊರಭಾಗ :**

ಕೇವಲ ಕಲ್ಲಿನ ಕಟ್ಟಡ ಮಾತ್ರ ಉಳಿದುಕೊಂಡಿದೆ. ಸಿಮೆಂಟಿನ ಎಲ್ಲ ಗಿಲಾವು ಬಿದ್ದು ಹೋಗಿದೆ. ಮೂರುಸ್ತರದ ಬುನಾದಿಯ ಮೇಲೆ ಗೋಡೆಯನ್ನು ನಿರ್ಮಿಸಲಾಗಿದೆ. ಗುಮ್ಮಟದ ಮೇಲ್ಭಾಗವು ಚಪ್ಪಟೆಯಾಗಿದ್ದು, ಕಮಾನಿನ ಕೆಳಭಾಗವು ಸಂಪೂರ್ಣವಾಗಿ ಬಿದ್ದುಹೋಗಿದೆ.

**ಒಳಭಾಗ :**

ಗೋಡೆಯ ಮೂಲಸ್ವರೂಪ ಎಲ್ಲ ಕಳೆದು ಹೋಗಿದೆ. ನೆಲವನ್ನು ಆಧುನಿಕವಾಗಿ ಪ್ಲಾಸ್ಟರ್ ಬಳಸಿ ಪುನರ್ ನಿರ್ಮಿಸಿದ್ದಾರೆ. ಒಳಭಾಗದ ಮೇಲೆ ವೃತ್ತಾಕಾರದ ಗುಮ್ಮಟವನ್ನು ನಿರ್ಮಿಸಲಾಗಿದೆ. ಇದಕ್ಕಾಗಿ ಸಣ್ಣ ಸಣ್ಣ ಕಲ್ಲಿನ ತುಂಡುಗಳನ್ನು ಇಟ್ಟಿಗೆಯಂತೆ ಬಳಸಿಕೊಳ್ಳಲಾಗಿದೆ. ಈ ಕಲ್ಲಿನ ತುಂಡುಗಳನ್ನು ಒಟ್ಟೊಟ್ಟಾಗಿ ಜೋಡಿಸುವುದರ ಮೂಲಕ ಗುಮ್ಮಟವನ್ನು ಕಟ್ಟಲಾಗಿದೆ. ಗುಮ್ಮಟದ ಕೆಳಭಾಗದ ಎರಡು ಬಾಗಿಲುಗಳನ್ನು ಮುಚ್ಚಲಾಗಿದೆ.[೯]

## ೪. ರಾಜಧಾನಿಯ ಕೇಂದ್ರದಿಂದ ಉತ್ತರಕ್ಕೆ ಇರುವ ಗುಮ್ಮಟಾಕಾರದ ಗೋರಿ.

ಇದೊಂದು ಸಣ್ಣ ಸಮಾಧಿಯಾಗಿದ್ದು. ಸುತ್ತಲೂ ಸಮಾಧಿ ಕಲ್ಲುಗಳಿವೆ. (Grave Stone)

**ಹೊರಭಾಗ :**

ಮೂರು ಸ್ಥರದ ಬುನಾದಿಯ ಮೇಲೆ ಗೋಡೆಗಳನ್ನು ನಿರ್ಮಿಸಲಾಗಿದೆ. ಈ ಗೋಡೆಗಳು ಇಂದಿಗೂ ತಮ್ಮ ಮೂಲ ಸ್ವರೂಪವನ್ನು ಉಳಿಸಿಕೊಂಡಿವೆ. ಗೋಡೆಗಳ ಮೇಲೆ ಯಾವುದೇ ಚಿತ್ರವಿಲ್ಲ. ಅಲಂಕಾರಗಳಿಲ್ಲ. ಇದರ ಬಾಗಿಲನ್ನು ಸಹ ಕಲ್ಲಿನ ಕಂಬಗಳಿಂದ ನಿರ್ಮಿಸಲಾಗಿದೆ. ಅದರ ಎರಡೂ ಬದಿಗಳಲ್ಲಿ ಕಮಾನಿನ ಕಿಟಕಿಗಳನ್ನು ಇಡಲಾಗಿದೆ. ಅಲ್ಲಲ್ಲಿ ಕಮಾನಿನ ಅಂಚಿನಲ್ಲಿ ಸುರಳಿಯಾಕಾರದ ಚಿತ್ರಗಳನ್ನು ಮಾಡಲಾಗಿದೆ. ಭಾವಣಿಯ ಮೇಲೆ ಯಾವುದೇ ಸಂಕೇತವನ್ನು ನಿರ್ಮಿಸಿಲ್ಲ.



**ಒಳಭಾಗ :**

ಒಳಭಾಗದಲ್ಲಿ ಯಾವುದೇ ಸಮಾಧಿ ಕಲ್ಲು ಉಳಿದಿಲ್ಲ. ಮೂರು ದಿಕ್ಕಿನ ಗೋಡೆಗಳಲ್ಲಿ ಕಮಾನುಗಳಲ್ಲಿ ಕಮಾನುಗಳನ್ನು ಮಾಡಲಾಗಿದೆ. ಇನ್ನುಳಿದ ಜ್ಯಾಮಿತಿಯ ರಚನೆಗಳು ಹೊರಭಾಗವನ್ನೇ ಹೋಲುತ್ತವೆ. ಮೇಲ್ಛಾವಣಿಯು ಎರಡು ಹಂತದಲ್ಲಿ ಚೌಕಕಾರದಲ್ಲಿದೆ.

## ೫. ರಾಜಧಾನಿಯ ಕೇಂದ್ರದಿಂದ ಉತ್ತರಕ್ಕಿರುವ ಚಪ್ಪಟೆ ಮೇಲ್ಛಾವಣಿಯ ಗೋರಿ.

ಇದು ಎರಡು ಭಾಗಗಳನ್ನು ಹೊಂದಿದ ಸಣ್ಣ ಕಟ್ಟಡವಾಗಿದೆ. ಈಗ ಬಹುಭಾಗ ಕುಸಿದು ಬಿದ್ದಿದೆ. ಮೂರು ದಿಕ್ಕಿನಲ್ಲಿ ಸ್ವಲ್ಪ ಗೋಡೆ ಮಾತ್ರ ಉಳಿದಿದೆ. ಗೋಡೆಗಳನ್ನು ಕಲ್ಲಿನ ಬುನಾದಿಯ ಮೇಲೆ ಕಟ್ಟಲಾಗಿದೆ. ಹೊರಭಾಗದಲ್ಲಿ ಯಾವುದೇ ಚಿತ್ರಗಳನ್ನು ಮಾಡಿಲ್ಲ. ಆದರೆ ಅಲ್ಲಲ್ಲಿ ಕಮಾನಿನಾಕಾರದ ಗೂಡುಗಳನ್ನು ಮಾಡಲಾಗಿದೆ. ಚಪ್ಪಟೆಯಾಕಾರದ ಮೇಲ್ಛಾವಣಿ ಇದೆ. ಅದನ್ನು ಸಿಮೆಂಟಿನ ಗಾರೆಯಿಂದ ನಿರ್ಮಿಸಲಾಗಿದೆ. ಹೊರಗಡೆ ನಿರುಪಯುಕ್ತ ಕಲ್ಲುಗಳಿಂದ ಕಟ್ಟಿದ ಗೋಡೆಯ ಅವಶೇಷವಿದೆ.[೬]

## ೬. ರಾಜಧಾನಿಯ ಕೇಂದ್ರದಿಂದ ವಾಯವ್ಯಕ್ಕೆ ಇರುವ ಚಪ್ಪಟೆ ಮೇಲ್ಛಾವಣಿಯ ಗೋರಿ.

ಇಂದಿಗೂ ಜನರ ಶ್ರದ್ಧಾಕೇಂದ್ರವಾಗಿರುವ, ಬಿಳಿಸುಣ್ಣವನ್ನು ಬಳಿದಿರುವ ಇದೊಂದು ಸಣ್ಣ ಕಟ್ಟಡ. ಬಹಳಷ್ಟು ಭಾಗ ಕುಸಿದು ಬಿದ್ದಿದೆ. ಅಥವಾ ಅಪಾಯಕಾರಿಯಾಗಿ ಬಾಗಿದೆ. ಈ ಕಟ್ಟಡ ನಾಲ್ಕು ಕಂಬಗಳ ಒಂದೇ ಕೋಣೆಯನ್ನು ಹೊಂದಿದೆ. ಕಂಬಗಳು ಅಷ್ಟಕೋನಾಕೃತಿಯ ಭಾಗಗಳನ್ನು ಹೊಂದಿವೆ. ಕಂಬಗಳ ಮೇಲ್ಭಾಗದ ತುದಿಗಳು ಛಾವಣಿಯ ಕಲ್ಲಿನ ಹಾಸು ಬಂಡೆಗಳಿಗೆ ಆಸರೆ ನೀಡಿವೆ. ದಕ್ಷಿಣಕ್ಕೆ ಕಚ್ಚಾಕಲ್ಲುಗಳಿಂದ (Rubble) ನಿರ್ಮಿಸಲಾಗಿದೆ. ಎತ್ತರದ ಗೋಡೆ ಇದೆ. ಈ ಗೋಡೆಯ ಕೆಲವು ಭಾಗ ಮಾತ್ರ ಪಶ್ಚಿಮದಲ್ಲಿ ಉಳಿದಿದೆ. ಪಶ್ಚಿಮ ಗೋಡೆಯಲ್ಲಿ ಪ್ರಾರ್ಥನೆಯ ಗೂಡನ್ನು ನಿರ್ಮಿಸಲಾಗಿದೆ. ಉತ್ತರದಲ್ಲಿ ಖಾಲಿ ಸ್ಥಳವನ್ನು ಬಿಡಲಾಗಿದೆ. ಮಧ್ಯದ ಕೋಣೆಯಲ್ಲಿ ಒಂದು ಸಮಾಧಿ ಕಲ್ಲು ಇದೆ.

ಅದರ ಮೇಲೆ ಅರೇಬಿಯಾ ಭಾಷೆಯಲ್ಲಿ 'ಅಲ್ಲಾ' ಎಂದು ಬರೆಯಲಾಗಿದೆ. ದಕ್ಷಿಣದ ಬಾಗಿಲು ಬಿಳಿ ಮೆಟ್ಟಿಲುಗಳಿವೆ. ಹೊರಭಾಗವನ್ನು ಗುರುತಿಸಲು ಸಾಧ್ಯವಿಲ್ಲ.[೭]

**೭. ರಾಜಧಾನಿಯ ಕೇಂದ್ರದಿಂದ ವಾಯುವ್ಯಕ್ಕೆ ಇರುವ ಚಪ್ಪಟೆ ಭಾವಣಿಯ ಗೋರಿ.**

ಈ ಭಾಗವು ಅತ್ಯಂತ ಸುರಕ್ಷಿತವಾಗಿ ಉಳಿದ ಗೋರಿ ಎಂದರೆ ಇದೊಂದೆ. ಇದರಲ್ಲಿ ಆಯತಕಾರದ ಎರಡು ಕೋಟೆಗಳಿವೆ. ದಕ್ಷಿಣಕ್ಕೆ ಬಾಗಿಲು ಇದೆ.

**ಹೊರಭಾಗ :**

ಈ ಕಟ್ಟಡ ಗೋಡೆಗಳನ್ನು ಎತ್ತರದ ತಳಹದಿ (ಬುನಾದಿ)ಯ ಮೇಲೆ ನಿರ್ಮಿಸಲಾಗಿದೆ. ಈ ಗೋಡೆಗಳು ತಮ್ಮ ಮೂಲ ಸ್ವರೂಪವನ್ನು ಉಳಿಸಿಕೊಂಡಿವೆ. ಹಳೆಯ ಕಾಲದ ಗಾರೆ ಇನ್ನು ಹಾಗೆ ಇದೆ. ೩ ಮತ್ತು ೨ ಸಾಲಿನಲ್ಲಿ ಕಂಬಗಳನ್ನು ನಿಲ್ಲಿಸಲಾಗಿದೆ. ಅವುಗಳನ್ನು ಕಚ್ಚಾಕಲ್ಲುಗಳಿಂದ ಮಾಡಲಾಗಿದೆ. ಕಟ್ಟಡದ ಉದ್ದಕ್ಕೂ (ಉತ್ತರದ ದಕ್ಷಿಣಕ್ಕೆ) ಎರಡು ಕಮಾನಿನ ಗೂಡುಗಳಿವೆ. ಅವುಗಳು ಆಯತಕಾರದ ಚೌಕಟ್ಟಿನಲ್ಲಿ ಬಂಧಿತವಾಗಿವೆ. ದಕ್ಷಿಣ ದಿಕ್ಕಿನ ಪಶ್ಚಿಮದಲ್ಲಿ ಬಾಗಿಲನ್ನು ಇಡಲಾಗಿದೆ. ಗೋಡೆಯ ಅಂಚುಗಳು ಪರ್ಯಾಯವಾಗಿ ಬಾಗಿ, ಅಲಂಕಾರವನ್ನು ಹೊಂದಿವೆ. ಮೂಲೆಗಳಲ್ಲಿ ಕಲ್ಲುಗಳನ್ನು ಜೋಡಿಸಲಾಗಿದೆ.

ಕಟ್ಟಡದ ಸೂರಿನ ಮೇಲೆ ಎತ್ತರದ ಗೋಡೆಯನ್ನು ನಿರ್ಮಿಸಲಾಗಿದೆ. ಈ ಗೋರಿಯು ದೇವಾಲಯದ ಬುನಾದಿಯನ್ನು ಹೋಲುತ್ತದೆ. ಕಮಾನುಗಳು ತೆರೆದುಕೊಂಡಿವೆ. ಗೋಡೆಯ ಕೆಳಭಾಗದಲ್ಲಿ ಕೆಲವು ಚಿತ್ರಗಳಿವೆ, ಸೂರಿನಲ್ಲಿ ಕೆಲವು ಸುರಳಿ ಚಿತ್ರಗಳಿವೆ.

**ಒಳಭಾಗ :**

ಒಳಭಾಗದ ಗೋಡೆಯು ಹೊರಭಾಗದಂತೆ ಸಿಮೆಂಟಿನ ಗಾರೆಯನ್ನು ಹೊಂದಿದೆ. ತೊಲೆ ಮತ್ತು ಅವುಗಳ ಮೇಲೆ ಹಾಕಲಾದ ಸೂರಿನ ಹಾಸು ಬಂಡೆಗಳು ಯಾವುದೇ ಅಲಂಕಾರಗಳನ್ನು ಹೊಂದಿಲ್ಲ. ಕೋಟೆಯ ಮಧ್ಯದಲ್ಲಿ ಒಂದು ಗೋರಿ ಇದೆ.

**೮. ರಾಜಧಾನಿಯ ಕೇಂದ್ರದಿಂದ ವಾಯುವ್ಯಕ್ಕೆ ಇರುವ ಚಪ್ಪಟೆ ಭಾವಣಿಯ ಗೋರಿ.**

ಈ ಗೋರಿಯನ್ನು ಕಚ್ಚಾಕಲ್ಲಿನ ಗೋಡೆಗಳು ಸುತ್ತುವರೆದಿವೆ. ೩ ಮತ್ತು ೨ ಸಾಲಿನ ಕಂಬಗಳು, ಮೂರು ಬುನಾದಿಯನ್ನು ಆಧಾರವಾಗಿರಿಸಿಕೊಂಡು ನಿಂತಿವೆ. ಪಶ್ಚಿಮದ ಗೋಡೆಯು ಕಚ್ಚಾ ಗಿಲಾವನ್ನು ಹೊಂದಿದೆ. ಕಮಾನುಗಳ ಮೇಲೆ ಇಟ್ಟಿಗೆಯ ಕಚ್ಚಾ ಕೆಲಸವನ್ನು ಮಾಡಲಾಗಿದೆ. ಉಳಿದ ಭಾಗದ ಗೋಡೆಗಳು ಸ್ವಲ್ಪ ಕುಸಿದಿವೆ. ಕಂಬಗಳು ಬಹುತೇಕ ಅಷ್ಟಾಕೃತಿಯ ಆವರಣಗಳನ್ನು ಹೊಂದಿವೆ. ಕಟ್ಟಡದ ಒಳಗೆ ಮೂರು ಸಮಾಧಿ ಕಲ್ಲುಗಳಿವೆ. ಕಮಲದ ಆಕೃತಿಯ ಕೆಲಸವನ್ನು ಕಾಣಬಹುದು. ಮೂರನೆಯ ಗೋರಿಯು ಚಪ್ಪಟೆಯಾದ ಮೇಲ್ಭಾಗವನ್ನು ಹೊಂದಿದೆ.[೮]

## ೯. ರಾಜಧಾನಿಯ ಕೇಂದ್ರದಿಂದ ವಾಯವ್ಯಕ್ಕೆ ಇರುವ ಚಪ್ಪಟೆ ಛಾವಣಿಯ ಗೋರಿ.

ಚೌಕಕಾರದ ಈ ಗೋರಿಯ ಹತ್ತಿರ ಒಂದು ದೊಡ್ಡ ಮರ ಬೆಳೆದುಕೊಂಡಿದೆ.

**ಹೊರಭಾಗ :**

ಮೂರು ಸ್ತರದ ಬುನಾದಿಯ ಮೇಲೆ ಕಚ್ಚಾಕಲ್ಲುಗಳಿಂದ ನಿರ್ಮಿಸಲಾದ ಗೋಡೆಯ ರಚನೆ ಇದೆ. ಈ ಗೋಡೆಗಳ ಮೇಲಿನ ಮೂಲ ಗಿಲಾವು ಇನ್ನೂ ಹಾಗೆ ಇದೆ. ಕೆಲವು ಅಲಂಕಾರಗಳನ್ನು ಸಹ ನೋಡಬಹುದು. ಗೋಡೆಗಳು ಹೆಚ್ಚು ಕಡಿಮೆ ಸಪಾಟಾಗಿದ್ದು, ದಕ್ಷಿಣದಲ್ಲಿ ಕಮಾನಿನಾಕಾರದ ಖಾಲಿಸ್ಥಳ ಇದೆ. ಪ್ರವೇಶ ದ್ವಾರದಲ್ಲಿ ಎರಡು ಕಲ್ಲುಗಳನ್ನು ಹಾಕಲಾಗಿದೆ. ಬಾಗಿಲಿನ ಎರಡು ಬದಿಗಳಲ್ಲಿ ಕಿಟಕಿಗಳನ್ನು ಇಡಲಾಗಿದೆ.

ಇಲ್ಲಿನ ಚಿತ್ತಾರದಲ್ಲಿ ಸುರಳಿ ಕೆಲವು ಮೋಹಕವಾಗಿದೆ. ತೊಲೆಗಳು ಮತ್ತು ಕಂಬಗಳು ಸೂರಿಗೆ ಆಸರೆ ನೀಡಿವೆ. ಛಾವಣಿಯ ಮೇಲೆ ಯಾವುದೇ ಗೋಡೆಯ ಕುರುಹು ಕಂಡುಬರುವುದಿಲ್ಲ.

**ಒಳಭಾಗ :**

ಮೂರು ದಿಕ್ಕಿನಲ್ಲಿ ಕಮಾನಿನ ರಚನೆ ಇದೆ. ಎರಡೂ ಪ್ರಾರ್ಥನಾ ಗೂಡುಗಳನ್ನು ನಿರ್ಮಿಸಲಾಗಿದೆ. ಸಮಾಧಿಯು ಖಾಲಿ ಇದೆ. ಒಳಗಿನ ಜ್ಯಾಮಿತಿಯ ರಚನೆಯೂ ಹೆಚ್ಚು ಕಡಿಮೆ ಹೊರಭಾಗವನ್ನು ಹೋಲುತ್ತವೆ. ಒಳಗಿನ ಛಾವಣಿಯ ಮೇಲ್ಭಾಗವು ಚಪ್ಪಟೆಯಾಗಿ ಚೌಕಕಾರದಲ್ಲಿದೆ.

## ೧೦. ರಾಜಧಾನಿಯ ಕೇಂದ್ರದಿಂದ ವಾಯವ್ಯಕ್ಕೆ ಇರುವ ಗುಮ್ಮಟ ರಹಿತ ಗೋರಿ.

ಮೂರು ಭಾಗಗಳನ್ನು ಹೊಂದಿರುವ ಈ ಸ್ಮಾರಕ ಇನ್ನು ಸಾಕಷ್ಟು ಉತ್ತಮ ಸ್ಥಿತಿಯಲ್ಲಿದೆ. ದಕ್ಷಿಣ ದ್ವಾರದಲ್ಲಿ ಹಲವಾರು ಸಮಾಧಿ ಕಲ್ಲುಗಳನ್ನು ಮೆಟ್ಟಿಲನ್ನಾಗಿಸಲಾಗಿದೆ.

**ಹೊರಭಾಗ :**

ಮೂರು ಸ್ತರದ ಬುನಾದಿಯ ಮೇಲೆ ಗೋಡೆಯನ್ನು ನಿರ್ಮಿಸಲಾಗಿದೆ. ೪ ಮತ್ತು ೨ರ ಸಾಲಿನ ಕಂಬಗಳು ಮಧ್ಯ ಕಲ್ಲಿನ ಬಂಡೆಗಳನ್ನು ಹಾಕಲಾಗಿದೆ. ಆಯತಕಾರದ ಚೌಕಟ್ಟಿನಲ್ಲಿ ಮೂರು ಕಮಾನುಗಳು ತೆರೆದುಕೊಂಡಿವೆ. ದಕ್ಷಿಣ ದಿಕ್ಕಿನಲ್ಲಿರುವ ಕಮಾನನ್ನು ಬಾಗಿಲನ್ನಾಗಿಸಿದೆ. ಅದರ ಅಕ್ಕ ಪಕ್ಕದಲ್ಲಿ ಹಲವಾರು ಸಣ್ಣ ಸಣ್ಣ ಗೂಡುಗಳು ನಿರ್ಮಾಣಗೊಂಡಿವೆ. ಪೂರ್ವ ಮತ್ತು ಪಶ್ಚಿಮ ದಿಕ್ಕಿನ ಕಮಾನುಗಳ ಕೆಲವು ಅವಶೇಷಗಳು ಮಾತ್ರ ಉಳಿದುಕೊಂಡಿವೆ. ಗೋಡೆಯ ಮೇಲ್ಭಾಗದಲ್ಲಿ ಅರ್ಧ ವೃತ್ತಾಕಾರದ ರಚನೆಗಳಿವೆ. ಅಲ್ಲಲ್ಲಿ ಸುರಳಿ ಚಿತ್ರಗಳಿವೆ.

**ಒಳಭಾಗ :**

ಒಳಭಾಗದ ಗೋಡೆಗಳಿಗೆ ಮೂಲ ಸ್ವರೂಪದ ಯಾವುದೇ ಗಿಲಾವು ಉಳಿದಿಲ್ಲ. ಒಂದೇ ಒಂದು ಸಣ್ಣ ಗೂಡನ್ನು (Niche) ನಿರ್ಮಿಸಲಾಗಿದೆ. ಅದನ್ನು ಕಾಡುಬಂಡೆಗಳಿಂದ ನಿರ್ಮಿಸಲಾಗಿದೆ. ಯಾವುದೇ ಸಮಾಧಿ ಕಲ್ಲು ಒಳಗೆ ಕಂಡುಬರುವುದಿಲ್ಲ.

**೧೧. ರಾಜಧಾನಿಯ ಕೇಂದ್ರದಿಂದ ಆಗ್ನೇಯ ದಿಕ್ಕಿನಲ್ಲಿ ದರ್ಗಾ.**

ಕಮಲಾಪುರ- ಕಂಪ್ಲಿ ರಸ್ತೆಗೆ ಹೊಂದಿಕೊಂಡಿರುವಂತೆ ಸ್ಮಶಾನದಲ್ಲಿ ಒಂದು ದರ್ಗಾ ಮತ್ತು ಒಂದು ಈದ್ಗಾ ಸ್ಮಾರಕಗಳು ಕಾಣಸಿಗುತ್ತವೆ. ದರ್ಗಾದ ಆವರಣ ಗೋಡೆಗೆ ಹೊಂದಿಕೊಂಡಿರುವ ಭಾಗ ಮೂಲ ಸ್ವರೂಪವನ್ನು ಉಳಿಸಿಕೊಂಡಿದೆ. ಉಳಿದ ಭಾಗವನ್ನು ಮೂಲ ಸ್ವರೂಪದಂತೆ ರಿಪೇರಿ ಮಾಡಲಾಗಿದೆ. (Renovated) ಮತ್ತು ಕೆಲವನ್ನು ಪುನರ್ ನಿರ್ಮಿಸಲಾಗಿದೆ. ಈ ಸ್ಮಾರಕದ ಪಶ್ಚಿಮದಲ್ಲಿ ಕೋಟೆ ಗೋಡೆ ಇದೆ. ಬಹುಶಃ ಅಲ್ಲೊಂದು ದಾರಿಯೇ ಇರಬಹುದು. ಈಗ ಆ ದಾರಿ ಕಾಣೆಯಾಗಿದೆ (ಮುಚ್ಚಲಾಗಿದೆ.) ಈ ಕಟ್ಟಡವಲ್ಲಿ ೮ ಮತ್ತು ೪ ಸಾಲಿನ ಕಂಬಗಳ ಹಜಾರ (Hall) ಇದೆ. ಇದು ಉತ್ತರ ಮತ್ತು ಪೂರ್ವಕ್ಕೆ ಮುಚ್ಚಲಾಗಿದೆ. ಆದ್ದರಿಂದ ದಕ್ಷಿಣ ಭಾಗವನ್ನು ತೆರೆಯಲಾಗಿದೆ. ಕಂಬಗಳ ಕೆಳಗಿನ ಕಲ್ಲುಗಳು ಮತ್ತು ಆವರಣಗಳು ಈಗಲೂ ಕಾಣಸಿಗುತ್ತವೆ. ಮೇಲ್ಭಾವಣಿಯ ತೊಲೆಗಳನ್ನು ಪುನರ್ ಬಳಸಿ, ಪುನರ್ ನಿರ್ಮಿಸಿದಂತೆ ತೋರುತ್ತದೆ. ದಕ್ಷಿಣ ಭಾಗದ ಸುರಳಿಯಾಕಾರದ ಚಾಲಾಕೃತಿಗಳಿವೆ. ಗೋಡೆಯ ಎತ್ತರ ಭಾಗದಲ್ಲಿ ಬಹಳಷ್ಟು ಇಟ್ಟಿಗೆ ಮತ್ತು ಗಾರೆ ಕೆಲಸ ಕಂಡುಬರುತ್ತದೆ. ಪಶ್ಚಿಮದ ಗೋಡೆಯಲ್ಲಿ ಗೂಡನ್ನು ಮಾಡಲಾಗಿದೆ. ಆದರೆ ಕಮಾನುಗಳು ಅದರ ಮೇಲಿನ ಅಲಂಕಾರಗಳು ಮೂಲ ಸ್ವರೂಪವನ್ನು ಕಳೆದುಕೊಂಡಿವೆ.

**೧೨. ಕಡ್ಡಿರಾಮಪುರದ ಗುಮ್ಮಟದ ಗೋರಿ.**

ಕಡ್ಡಿರಾಮಪುರದ ವಾಯುವ್ಯಕ್ಕೆ ಸ್ವಲ್ಪ ಅಂತರದಲ್ಲಿ ಸಣ್ಣ ಗುಮ್ಮಟದ ಗೋರಿ ಕಂಡುಬಂದಿದೆ.

ಚೌಕಕಾರದ ಈ ಕಟ್ಟಡದ ದಕ್ಷಿಣದ ಮಧ್ಯ ಭಾಗದಲ್ಲಿ ಬಾಗಿಲನ್ನು ತೆರೆಯಲಾಗಿದೆ. ಯಾವುದೇ ಸಮಾಧಿ ಕಲ್ಲು ಕಂಡುಬರುವುದಿಲ್ಲ.

**ಹೊರಭಾಗ :**

ಗೋರಿಯ ಗೂಡುಗಳು ಎರಡು ಭಾಗಗಳಲ್ಲಿ ಒಂದೇ ತೆರನಾಗಿವೆ. ಎರಡು ಆಯತಾಕಾರದ ಕಮಾನುಗಳನ್ನು ತೆರೆಯಲಾಗಿದೆ. ಅದರಲ್ಲಿ ಮತ್ತೊಂದು ಚೌಕಟ್ಟಿನ ಸಣ್ಣ ಕಮಾನನ್ನು ಮಾಡಲಾಗಿದೆ. ದಕ್ಷಿಣದ ಮಧ್ಯದ ತೆರೆದ ಭಾಗ ಬಾಗಿಲಾಗಿದೆ. ಗೋಡೆಯ ತೀರಾ ಮೇಲ್ಭಾಗದಲ್ಲಿ ಸಣ್ಣ ಸಣ್ಣ ತೆರವುಗಳನ್ನು ಬಿಡಲಾಗಿದೆ. ಮೇಲ್ಛಾವಣಿಯ ಮೇಲೆ ಲಂಬವಾಗಿ ಗುಮ್ಮಟವನ್ನು ನಿರ್ಮಿಸಲಾಗಿದೆ.

**ಒಳಭಾಗ :**

ಒಳಭಾಗದ ಗೋಡೆಯ ಎರಡು ಬದಿಯ ಮಧ್ಯದಲ್ಲಿ ಕಮಾನುಗಳು ತೆರೆದುಕೊಂಡಿವೆ. ಪ್ರತಿಮೂಲೆಯ ಕೆಳಗೆ ವೃತ್ತಾಕಾರದ ಗುಮ್ಮಟ ಆಕೃತಿಯನ್ನು ಮಾಡಲಾಗಿದೆ. ಹಳೆಯ ಗಾರೆಯ ಕುರುಹುಗಳಿದ್ದರೂ ಅವುಗಳಲ್ಲಿ ಯಾವುದೇ ಅಲಂಕಾರ ಇಲ್ಲ. ಗುಮ್ಮಟದ ಮೇಲಿನ ಕೇಂದ್ರದಲ್ಲಿ ಲೋಹದ ಕೊಂಡಿ (Metal Hook)ಯನ್ನು ಇಡಲಾಗಿದೆ. ಅದನ್ನು ಬಹುಶಃ ದೀಪಗಳನ್ನು ನೇತು ಹಾಕಲು ಬಳಸಿದ್ದಿರಬಹುದು.

**೧೩. ಕಡ್ಡಿರಾಮಪುರದ ಗುಮ್ಮಟ ರಹಿತ ಗೋರಿ.**

ಕಡ್ಡಿರಾಮಪುರದಲ್ಲಿ ದೊರೆತ ಎರಡು ಗೋರಿಗಳಲ್ಲಿ ಇದು ದೊಡ್ಡದು. ಈ ಹಿಂದೆ ಹೇಳಿದ ಗೋರಿಯಿಂದ ಸ್ವಲ್ಪ ದೂರದಲ್ಲಿ ನಿರ್ಮಿಸಲ್ಪಟ್ಟಿದೆ. ಇದರ ಗುಮ್ಮಟ ಸಂಪೂರ್ಣವಾಗಿ ಕಾಣೆಯಾಗಿದೆ. ಇದಕ್ಕೆ ಗಾರೆಯ ಗಿಲಾವು ಕೂಡ ಇಲ್ಲ.

ಗೋರಿಯು ನಾಲ್ಕು ದಿಕ್ಕಿನಲ್ಲಿ ಬಾಗಿಲುಗಳನ್ನು ಬಿಡಲಾಗಿದೆ. ಈ ಕಟ್ಟಡವು ಸಮಮಿತಿ ಆಕಾರದಲ್ಲಿದೆ. ಆದರೆ ದಕ್ಷಿಣದಲ್ಲಿ ಮಾತ್ರ ಒಳ ಬರಲು ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಕಟ್ಟಡದ ಒಳಗೆ ಮೂರು ಗೋರಿಗಳಿವೆ.

**ಹೊರಭಾಗ :**

ಹೊರಭಾಗದ ಗೋಡೆಗಳು ಸಾದಾ ಬುನಾದಿಯ ಮೇಲೆ ನಿಂತಿವೆ. ಅವು ಎರಡು ಅಂತಸ್ತು ಹೊಂದಿವೆ. ಕೆಳಭಾಗದ ಗೋಡೆಯಲ್ಲಿ ಮೂರು ಕಮಾನುಗಳಿದ್ದು, ಮಧ್ಯದ ಕಮಾನನ್ನು ಬಾಗಿಲನ್ನಾಗಿಸಲಾಗಿದೆ. ಬಾಗಿಲುಗಳ ಎರಡು ಬದಿಯಲ್ಲಿ ಎತ್ತರದ ಕಟ್ಟೆಯನ್ನು ಮಾಡಲಾಗಿದೆ. ಗೋಡೆಗಳ ಎರಡನೆ ಹಂತವನ್ನು ಮೊದಲನೆ ಹಂತಕ್ಕಿಂತ ಸ್ವಲ್ಪ ಹಿಂದಕ್ಕೆ ಕಟ್ಟಲಾಗಿದೆ. ಅದರಲ್ಲಿ ಆರು ಕಮಾನುಗಳಿವೆ. ಮೇಲ್ಭಾಗದಲ್ಲಿ ಕಚ್ಚಾ ಕಲ್ಲುಗಳು ಗಾರೆಯನ್ನು ಹಾಕಲಾಗಿದೆ.

**ಒಳಭಾಗ :**

ಒಳ ಗೋಡೆಗಳು ಸಹ ಎರಡು ಅಂತಸ್ತಿನಲ್ಲಿ ಭಾಗವಾಗಿವೆ. ಕೆಳಭಾಗದಲ್ಲಿ ಮೂರು ಕಮಾನುಗಳು ತೆರೆದುಕೊಂಡಿವೆ. ಗೂಡುಗಳ ಮೇಲ್ಭಾಗವು ಕೋನಾಕೃತಿಯಲ್ಲಿದೆ. ಮೇಲ್ಭಾಗದ ಮಧ್ಯದಲ್ಲಿ ಮಾತ್ರ ಕಮಾನು ಇದೆ. ಒಳಭಾಗದಲ್ಲಿ ವೃತ್ತಾಕಾರದ ಛಾವಣಿ ಇದೆ. ನೆಲಹಾಸು ಉಳಿದಿಲ್ಲ. ಗೋರಿಗಳ ಪಕ್ಕದಲ್ಲಿ ಅಂಚುಗಳನ್ನು ನಿರ್ಮಿಸಲಾಗಿದೆ. ಅವುಗಳ ಮೇಲ್ಭಾಗ ಚೂಪಾಗಿದೆ.

ಈ ಕಟ್ಟಡದ ಪಶ್ಚಿಮಕ್ಕೆ ನಾಲ್ಕು ಕಲ್ಲಿನ ಕಂಬಗಳನ್ನು ಕಚ್ಚಾ ಕಲ್ಲು ಬಳಸಿ (Rubble) ನಿರ್ಮಿಸಿದ್ದಾರೆ. ಬಹುಶಃ ಇದು ಇನ್ನೊಂದು ಗುಮ್ಮಟದ ಗೋರಿ ಇರಬಹುದು.

**೧೪. ಕಮಲಾಪುರದ ಪಶ್ಚಿಮಕ್ಕೆ ಇರುವ ಗುಮ್ಮಟದ ಗೋರಿ.**

ಕಮಲಾಪುರದಿಂದ ಪಶ್ಚಿಮಕ್ಕೆ ಸುಮಾರು ೫ ಕಿ.ಮೀ ದೂರದಲ್ಲಿರುವ ನಾಗಲಾಪುರ ಎಂಬ ಗ್ರಾಮದಲ್ಲಿ ಈ ಸಣ್ಣ ರಚನೆ (ಸ್ಮಾರಕ) ಕಂಡುಬಂದಿದೆ. ಗುಮ್ಮಟವನ್ನು ಹೊಂದಿ, ನಾಲ್ಕು ದಿಕ್ಕಿನಲ್ಲಿ ತೆರೆದುಕೊಂಡಿರುವ ಏಕೈಕ ಉದಾಹರಣೆ ಇದೊಂದೆ.

**ಹೊರಭಾಗ :**

ಗೋಡೆಗಳು ಸಾಪಾಗಿವೆ. ಮಧ್ಯದಲ್ಲಿ ಕಮಾನುಗಳು ತೆರೆದುಕೊಂಡಿವೆ. ಕಮಾನುಗಳು ಮೇಲ್ಭಾಗವನ್ನು ಕೋನಾಕೃತಿಯಲ್ಲಿ ಚೂಪಾಗಿ ನಿರ್ಮಿಸಲಾಗಿದೆ. ಇದರ ಇಟ್ಟಿಗೆ ೫ ಗಾರೆ ಬಹುತೇಕ ಮುರಿದು ಹೋಗಿವೆ. ಆದರೆ ಸ್ತಂಭಗಳ ಕೆಳಭಾಗ ಮಾತ್ರ ಸುಸ್ಥಿತಿಯಲ್ಲಿದೆ.

**ಒಳಭಾಗ :**

ಒಳಭಾಗದ ಕಮಾನುಗಳು ಎರಡು ಅಂಚುಗಳನ್ನು ಹೊಂದಿವೆ. ಅವುಗಳ ಕಟ್ಟಡದ ಮೇಲ್ಭಾವಣಿಗೆ ಆಸರೆ ನೀಡಿವೆ. ಗುಮ್ಮಟದಲ್ಲಿ ಆಯತಕಾರದ ತೆರವುಗಳಿವೆ.

**೧೫. ಹೊಸಪೇಟೆಯ ಗುಮ್ಮಟದ ಗೋರಿ.**

ಚೌಕಕಾರದ ಕೋಣೆಯ ಮೇಲೆ ಗುಮ್ಮಟವನ್ನು ನಿರ್ಮಿಸಲಾಗಿದೆ. ಈ ಕಟ್ಟಡವು ದಕ್ಷಿಣಕ್ಕೆ ತೆರೆದುಕೊಂಡಿದೆ. ಈ ಕಟ್ಟಡದ ಗೋಡೆಯ ಬಹುತೇಕ ಭಾಗಗಳು ಒಂದೇ ತೆರನಾಗಿವೆ. ಕಮಾನಿನ ರೂಪದಲ್ಲಿ ತೆರೆದುಕೊಂಡ ಸಮತಲದ ಎರಡು ಸಾಲುಗಳನ್ನು ಕಾಣಬಹುದಾಗಿದೆ. ಗೋಡೆಯ ಮೇಲೆ ಅಲ್ಲಲ್ಲಿ ಹೂವಿನಾಕಾರದ ಕೆತ್ತನೆ ಮಾಡಲಾಗಿದೆ. ಗೋಡೆಯ ಮೇಲ್ಭಾಗದಲ್ಲಿ ವೃತ್ತಾಕಾರದ ರಚನೆಗಳನ್ನು ಮಾಡಲಾಗಿದೆ.

ಮೇಲ್ಭಾಗದಲ್ಲಿ ಎತ್ತರದ ಅಷ್ಟಭುಜಾಕೃತಿಯ ಗುಮ್ಮಟ ನಿರ್ಮಿಸಲಾಗಿದೆ. ಅದರ ಮೇಲೆ ಚಿತ್ತಾರಗಳನ್ನು ಮಾಡಲಾಗಿದೆ.[೨] ಹೊಸಪೇಟೆಯ ನೆಹರೂ ಕಾಲೋನಿ ಪ್ರದೇಶ ಹಿಂದೆ ತಿರುಮಲದೇವಿ ಪಟ್ಟಣದ ನೆಲೆಯಾಗಿತ್ತು. ಇದರ ನೈರುತ್ಯದಲ್ಲಿರುವ ಎರಡು ಗೋರಿ ಕಟ್ಟಡವನ್ನು ಹೋಲುತ್ತವೆ. ಶೈಲಿಯಲ್ಲಿ ಗುಲ್ಬರ್ಗಾದ ಬಹಮನಿ ವಾಸ್ತುಶಿಲ್ಪದ ಲಕ್ಷಣಗಳನ್ನು ಹೊಂದಿವೆ. ಈ ಎರಡು ಕಟ್ಟಡಗಳ ಮುಂದಿನ ಭಾಗಗಳು ಓಸ್ರಿದ ಕಮಾನುಗಳನ್ನು ಹೊಂದಿವೆ. ಇವುಗಳಲ್ಲಿ ಒಂದು ಗುಮ್ಮಟ ರಹಿತವಾಗಿದ್ದವು. ಮತ್ತೊಂದು ಗುಮ್ಮಟ ಹೊಂದಿದೆ. ವಿಜಯನಗರ ಕಾಲಕ್ಕೆ ಇಲ್ಲಿ ಮುಸ್ಲಿಂ ವಸತಿ ನೆಲೆ ಇತ್ತೆಂಬುದು ಸ್ಪಷ್ಟ.

**೧೬. ಶಿಥಿಲಗೊಂಡ ದ್ವಾರಬಾಗಿಲು**

ಈಗ ಇದರ ಕೇವಲ ಒಂದು ಭಾಗವು ಮಾತ್ರ ಉಳಿದುಕೊಂಡಿದೆ. ಪೂರ್ವ-ಪಶ್ಚಿಮಕ್ಕೆ ಮಾರ್ಗ ಇರುವಂತೆ ಈ ರಚನೆಯು ಎರಡು ಕಟ್ಟೆಗಳನ್ನು ಹೊಂದಿದೆ (Plat Forms) ಇದರ ಹೊರಗೆ

ಪೂರ್ವದಲ್ಲಿ ಒಂದು ಕಮಾನು ಇದೆ. ಇದರ ಕೆಳಭಾಗವನ್ನು ಈಗಲೂ ಕಮಾನುಗಳ ಮಧ್ಯದ ಕಂಬ (Piller)ದ ಮೂಲಕ ಗುರುತಿಸಬಹುದಾಗಿದೆ. ಈ ದ್ವಾರದ ಎರಡೂ ಬದಿಯ ಗೋಡೆಗಳಲ್ಲಿ ಪ್ರಾರ್ಥನಾ ಗೂಡುಗಳನ್ನು ಮತ್ತು ದಕ್ಷಿಣದಲ್ಲಿ ಹನುಮನ ಮತ್ತು ವಿಷ್ಣುವಿನ ಸಂಕೇತಗಳನ್ನು ಕೆತ್ತಲಾಗಿದೆ.

**೧೭. ಎರಡು ಅಂತಸ್ತುಗಳುಳ್ಳ ಆಯತಾಕಾರದ ಮಂಟಪ ಅಥವಾ ಕಾವಲು ಗೋಪುರ**

ಮೊದಲನೆ ಅಂತಸ್ತಿನಲ್ಲಿ ಎಂಟು ಒಂದೇ ರೀತಿಯ ಕಂಬಗಳಿದ್ದು ಅವುಗಳ ಕಮಾನುಗಳ ದ್ವಾರವನ್ನು ಹೊಂದಿದ್ದು ಅದು ಮಧ್ಯದ ಆಯತಾಕಾರದ ಕೋಣೆಗೆ ತೆರೆದುಕೊಳ್ಳುತ್ತದೆ. ಚೌಕಕಾರದ ಕಲ್ಲುಗಳ ಬೂದಿಯನ್ನು ಹೊಂದಿದೆ (ಈಶಾನ್ಯದಲ್ಲಿ). ಆದರೆ ಈ ಮಂಟಪದಿಂದ ಪ್ರತ್ಯೇಕವಾಗಿ ಮೆಟ್ಟಿಲುಗಳ ರಚನೆ ಇದೆ. ಈ ಮೆಟ್ಟಿಲುಗಳು ನೇರವಾಗಿ ಎರಡನೆ ಅಂತಸ್ತಿಗೆ ಹೋಗುತ್ತವೆ. ಇಲ್ಲಿ ಏಳು ದಿಕ್ಕಿನಲ್ಲಿ ಕಮಾನುಗಳುಳ್ಳ ಏಳು ಕಿಟಕಿಗಳನ್ನು ಇಡಲಾಗಿದೆ. ಎಂಟನೆಯದನ್ನು ಈಶಾನ್ಯದಲ್ಲಿ ಕಮಾನಿನ ತೆರವು (ದ್ವಾರ) ಇದ್ದು ಅದು ಎರಡನೆಯ ಅಂತಸ್ತಿಗೆ ಹೋಗಲು ಮಾರ್ಗವಾಗಿದೆ.

**ಹೊರಭಾಗ :**

ಬಹಳಷ್ಟು ಭಾಗ ನಾಶಗೊಂಡಿದೆ. ಅಥವಾ ಅದನ್ನು ಪುನರ್ ರಚಿಸಲಾಗಿದೆ. ಗೋಪುರ (Stair Case)ದ ಚೌಕಕಾರದ ಕಲ್ಲುಗಳು ಮೂರು ಭಾಗಗಳಿವೆ. ಪೂರ್ಣ ಮೇಲ್ಭಾಗದಲ್ಲಿ ಹೊರಚಾಚಿದ ಕಲ್ಲುಗಳು ಇವೆ. ಕಂಬಗಳ ಹತ್ತಿರ ಕೋನಾಕೃತಿಯಲ್ಲಿ ಸರಳವಾಗಿ ಕಲ್ಲನ್ನು ಇಡಲಾಗಿದೆ. ಈ ಮೆಟ್ಟಿಲು ಗೋಪುರದ ಉತ್ತರ ಮತ್ತು ದಕ್ಷಿಣದಲ್ಲಿ ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಅಂತಸ್ತಿನ ಕಮಾನಿನ ದ್ವಾರಗಳು ಸರಳವಾಗಿ ಆಯತಾಕಾರದಲ್ಲಿವೆ. ಮತ್ತು ಮೂರು ಕಡೆ ಮಾತ್ರ ಚೂಪಾದ ಮೊನೆಯುಳ್ಳ ಕಮಾನುಗಳಿವೆ. ಒಳಭಾಗದ ಕಮಾನುಗಳು ಸರಳವಾದ ಸುರಳಿಯಿಂದ ಕಂಬಗಳ ಮೇಲಿಂದ ಎದ್ದು ನಿಂದಿವೆ. ಈಶಾನ್ಯದ ಕಮಾನಿನ ದ್ವಾರವು ಇದೇ ಮಾದರಿಯನ್ನು ಹೋಲುತ್ತದೆ. ಆದರೆ ಉಳಿದ ಕೆಲವು ಭಾಗಗಳಲ್ಲಿ (ಮೂಲೆಗಳಲ್ಲಿ) ಕಮಾನುಗಳು ಹೆಚ್ಚು ಸಂಕೀರ್ಣಗೊಂಡಿವೆ. ಇಲ್ಲಿ ಇನ್ನು ಎರಡೆರಡು ಕಮಾನುಗಳನ್ನು ಹೆಚ್ಚುವರಿಯಾಗಿ ತೆರೆಯಲಾಗಿದೆ. ಆದರೆ ಅವುಗಳಿಗೆ ಆಸರೆಯಾಗಿ ಕಂಬಗಳಲ್ಲಿ ಹೊರಭಾಗದ ಕಮಾನುಗಳಿಗೆ ಪ್ಲಾಸ್ಟರ್‌ನ ಹೊದಿಕೆ ಇದೆ. ಪ್ರತಿ ಮೂಲೆಯಲ್ಲಿ ವಕ್ರವಾಗಿ ಬಾಗಿದ ಮತ್ತು ಪ್ಲಾಸ್ಟರ್‌ನಿಂದ ಮಾಡಿದ ಆಸರೆಯನ್ನು ನಿರ್ಮಿಸಲಾಗಿದೆ. ಈ ಆಸರೆ ಕಲ್ಲುಗಳಿಗೆ ಮೂರು ಆಸರೆಯನ್ನು ನಿರ್ಮಿಸಲಾಗಿದೆ. ಈ ಆಸರೆ ಕಲ್ಲುಗಳಿಗೆ ಮೂರು ಇಳಿಬಿದ್ದ ಮಾದರಿಯಲ್ಲಿ ಹೂ-ಬಳ್ಳಿಗಳ ರಚನೆಯನ್ನು ಮತ್ತು ಇತರ ಚಿತ್ರಗಳನ್ನು ಅಲಂಕರಿಸಲಾಗಿದೆ. ಅಲ್ಲಿ ನವಿಲು ಮೊದಲಾದ ಪಕ್ಷಿಗಳ ರಚನೆ ಕೂಡ ಇದೆ. ಈ ಆಸರೆಯ ಆವರಣಗಳು ತೊಲೆಗೆ ಮತ್ತು ಛತ್ತಿಗೆ ಆಸರೆ ನೀಡುತ್ತವೆ. ಎರಡನೆಯ ಅಂತಸ್ತಿನ ಯೋಜನೆ ಹೆಚ್ಚು ವಿಸ್ತಾರವಾಗಿದೆ. ಮೂಲೆಗಳ ಬಿಂದುಗಳಲ್ಲಿ (ಮೂಲ ದಿಕ್ಕು Eardial Points) ಮೂರು ದಿಕ್ಕಿನಲ್ಲಿ ಮತ್ತು ಈಶಾನ್ಯದ ರಚನೆ ಒಂದೇ ತೆರನಾಗಿದೆ. ಅಲ್ಲಿ (ಈಶಾನ್ಯದಲ್ಲಿ) ಈಗ

ಮೆಟ್ಟಿಲುಗಳನ್ನು ಜೋಡಿಸಲಾಗಿದೆ. ಮೇಲ್ ಅಂತಸ್ತಿನ ಗೋಡೆಯ ಹೊರಭಾಗದಲ್ಲಿ ಕೋನಾಕೃತಿಯ ಹೊರ ಪ್ರಕ್ಷೇಪಗಳನ್ನು ಮಾಡಲಾಗಿದೆ. ಲಂಬವಾಗಿ ನಂತರ ಕೋನಾಕೃತಿಯ ತಿರುವುಗಳಿದ್ದು ಅವು ಕಿಟಕಿಯ ಕೆಳಭಾಗದಲ್ಲಿವೆ. ಕಮಾನಿನಾಕೃತಿಯ ತೆರವುಗಳು ದೊಡ್ಡ ದೊಡ್ಡ ಚೌಕಟ್ಟುಗಳನ್ನು ಹೊಂದಿವೆ. ಈ ತೆರವು ಮತ್ತು ಚೌಕಟ್ಟು ಎರಡಕ್ಕೆ ಅಲಂಕಾರ ಮಾಡಲಾಗಿದೆ. ಹೊರ ಕಮಾನಿನ ಮೇಲ್ಭಾಗದ ಮಧ್ಯದಲ್ಲಿ ಅರ್ಧ ಅಲಂಕೃತ ರಚನೆಗಳಿವೆ. ಪ್ರತಿ ಗೋಡೆಯ ರಚನೆಯು ಇನ್ನೊಂದಕ್ಕಿಂತ ಭಿನ್ನವಾಗಿದೆ. ಇಲ್ಲಿ ನಾಲ್ಕು ಆಸರೆಯ ಆವರಣಗಳಿದ್ದು ಅವುಗಳಿಗೆ ಎರಡೆರಡು ಇಳಿಜಾರಿನ ರಚನೆಗಳಿವೆ. ಇವುಗಳ ಮೇಲೆ ಆಯತಾಕಾರದ ತೆರವುಗಳಿವೆ. ಎರಡೆರಡು ಆವರಣಗಳ ಮಧ್ಯೆ ಪ್ಲಾಸ್ಟರ್‌ನಿಂದ ಮಾಡಿದ ಎಲೆ ಬಳ್ಳಿಗಳ ಸುರಳಿಯಾಕಾರದ ರಚನೆಗಳಿವೆ. ಈ ಆಸರೆಯ ಆವರಣಗಳು ಕಟ್ಟಡದ ಸುತ್ತಲೂ ಪ್ರಕ್ಷೇಪದ ಮಾದರಿಯಲ್ಲಿ ಮುಂದುವರಿದೆ. ಇಲ್ಲಿಂದ ಗೋಡೆಗಳ ಮೇಲೆ ಇನ್ನೂ ಒಂದೊಂದು ಪ್ರಕ್ಷೇಪವಿದ್ದು ಅವು ಮೇಲೆ ಸಾಗಿದಂತೆ ಚೂಪಾಗುತ್ತ ಹೋಗುತ್ತವೆ. ಇಲ್ಲಿಂದ ಮೇಲೆ ಎಲ್ಲ ಗೋಡೆಗಳು ಒಂದೇ ರೀತಿಯಾಗಿವೆ. ಅಲ್ಲೊಂದು ಇಳಿಜಾರಿನ ಛತ್ತು ಇದ್ದು ಅದು ಆಸರೆಯ ಗೋಡೆಗಳಿಗೆ ಹೊಂದಿಕೊಂಡಿದೆ.

ಈ ಮಂಟಪದ ಮೇಲೆ ನಿರ್ಮಿಸಲಾದ ಗೋಪುರವು ಎಂಟು ದಿಕ್ಕಿನಲ್ಲಿಯೂ ಸಮಮಿತಿಯಲ್ಲಿದೆ. ಈ ಗೋಪುರದ ಕೆಳಭಾಗದಲ್ಲಿ ಲಂಬಕಾರದ ರಚನೆ ಇದ್ದು ಎರಡು ಕೋನಾಕೃತಿಯ ತಿರುವುಗಳು ಸಣ್ಣ ಭಾಗದೊಂದಿಗೆ ಪ್ರತ್ಯೇಕಿಸಲ್ಪಟ್ಟಿವೆ. ಅವುಗಳ ಸುತ್ತಲೂ ಸಣ್ಣ ಕಂಬ ಕಟ್ಟಡ (ಮಾದರಿ) ಇದ್ದು ಅವುಗಳಲ್ಲಿ ಸಣ್ಣ ಗುಮ್ಮಟಾಕಾರದ ಕಿಂಡಿಗಳಿವೆ. ಮೆಟ್ಟಿಲು ಗೋಪುರದ ಹೊರಭಾಗವು ಹೆಚ್ಚು ಕಡಿಮೆ ಸಾದಾ ಇದ್ದು ಅಲ್ಲಲ್ಲಿ ಕೆಲವು ಸಣ್ಣ ಕಮಾನಿನಾಕೃತಿಯ ತೆರವುಗಳಿವೆ. ಮೇಲ್ಭಾಗದಲ್ಲಿ ಚೂಪಾಗಿರುವ ಕಮಾನಿನ ಗೂಡು ಈ ಮೆಟ್ಟಿಲು ಮತ್ತು ಅಷ್ಟಭುಜಾಕೃತಿಯ ಕೋಣೆಯ ಮಧ್ಯೆ ಸ್ಥಳವನ್ನು ಕಲ್ಪಿಸಿದೆ (Gap) ಈ ರಚನೆಯ ಆಧಾರದ ಮೇಲೆ ಮೆಟ್ಟಿಲುಗಳನ್ನು ಈ ಮಂಟಪಕ್ಕೆ ನಂತರ ಜೋಡಿಸಲಾಗಿದೆ.

**ಒಳಭಾಗ :**

ಅಷ್ಟಭುಜಾಕೃತಿಯ ಕೋಣೆಯಲ್ಲಿ ಪ್ರತಿ ಕಂಬ (Pier)ಗಳ ಮೇಲೆ ಎರಡು ಮತ್ತು ಮೂರು ಸಮತಲದಲ್ಲಿರುವ ಕಮಾನುಗಳಿವೆ. ಸುತ್ತಲೂ ವೃತ್ತಾಕಾರದ ಪ್ರಕ್ಷೇಪವಿದೆ. ಮೂಲೆಗಳಲ್ಲಿ ಗುಮ್ಮಟದ ತಳಭಾಗದ ರಚನೆ ಕಂಡುಬರುತ್ತದೆ. ಮೇಲ್ಭಾಗದ (ಎರಡನೆಯ) ಅಂತಸ್ತಿನ ಕೋಣೆಯು ಸಹ ಸರಳವಾಗಿದೆ. ಇಲ್ಲಿನ ಗೂಡುಗಳು ಎರಡೂ ತೆರನಾಗಿ ನೇರವಾದ ಮತ್ತು ವಕ್ರವಾದ ಹೊರ ಆಕಾರವನ್ನು (Contour) ಹೊಂದಿವೆ. ಮೆಟ್ಟಿಲುಗಳಿಗೆ ಹೋಗುವ ದಾರಿ ಮತ್ತು ಮೆಟ್ಟಿಲುಗಳ ಮೇಲೆ ಸಹ ಕಮಾನಿನಾಕಾರದ ಗೂಡುಗಳಿವೆ.

## ೧೮. ಒಂಭತ್ತು ಗುಮ್ಮಟಗಳುಳ್ಳ ಮಂಟಪ

ಈ ರಚನೆಯನ್ನು ಗಮನಿಸಿದಾಗ ಆಗಲೇ ಶಿಥಿಲಗೊಂಡ ಮತ್ತು ಅರ್ಧ ನಿರ್ಮಿಸಿದ ಬುನಾದಿಯ ಮೇಲೆ ಮತ್ತೊಮ್ಮೆ ನಿರ್ಮಿಸಿದಂತೆ ಕಂಡುಬರುತ್ತದೆ.

ಈ ಕಟ್ಟಡವು ೩*೩ರಂತೆ ಒಟ್ಟು ೯ ಗುಮ್ಮಟಗಳ ವಿಭಾಗವನ್ನು ಹೊಂದಿದೆ. ಪ್ರತಿ ವಿಭಾಗವು ಎರಡು ಸ್ತಂಭಗಳನ್ನು ಆಧರಿಸಿದ ಕಮಾನು ಹೊಂದಿದೆ. ಇವು ಉತ್ತರದಲ್ಲಿ ತೆರೆದುಕೊಂಡಿವೆ. ಕೇಂದ್ರದಲ್ಲಿ ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ನೆಲದಿಂದ ಸ್ವಲ್ಪ ಎತ್ತರದಲ್ಲಿ ಪೂರ್ವ ಪಶ್ಚಿಮವಾಗಿ ಮೂರು ಸಣ್ಣ ಆಯತಾಕಾರದ ಕೋಣೆಗಳಿದ್ದು, ಅವುಗಳಿಗೆ ಕಮಾನಿನ ದ್ವಾರಗಳಿವೆ. ಈಶಾನ್ಯ ಮತ್ತು ನೈರುತ್ಯದ ಮೂಲೆಗಳಲ್ಲಿ ಎರಡು ಗೋಡೆಗಳಲ್ಲಿ ಆಳವಾದ ಪ್ರಾರ್ಥನಾ ಗೂಡುಗಳನ್ನು ನಿರ್ಮಿಸಲಾಗಿದೆ. ಈ ಎರಡು ಗೋಡೆಗಳು ಮತ್ತು ಮಧ್ಯದ ಪಡಸಾಲೆಯ (Hall)ನ ಉತ್ತರದ ದ್ವಾರಗಳನ್ನು ಕೆಡವಲಾದ ಹಳೆಯ ಬುನಾದಿಯ ಕಲ್ಲುಗಳ ಮೇಲೆ ನಿರ್ಮಿಸಲಾಗಿದೆ. ಈ ಮಂಟಪವು ಬಹಶಃ ಉತ್ತರಕ್ಕೆ ತೆರೆದುಕೊಂಡಂತೆ ವಿಶಾಲವಾದ ಆಸ್ಥಾನವನ್ನು ಹೊಂದಿದೆ.

**ಹೊರಭಾಗ :**

ಈ ಮಂಟಪದ ಮೂರು ದಿಕ್ಕುಗಳು ಪೂರ್ಣವಾಗಿ ಸಾದಾ ಇವೆ. ಅಲ್ಲಲ್ಲಿ ಅವುಗಳಲ್ಲಿ ಆಸರೆಯ ಆವರಣಗಳ ಕಚ್ಚಾಕಲ್ಲುಗಳನ್ನು ಕಾಣಬಹುದು. ಅವು ಮೊದಲಿನ ಕಟ್ಟಡಕ್ಕೆ ಛತ್ತಿಗೆ ಆಸರೆಯನ್ನು ನೀಡಿರಬಹುದು. ಆದರೆ ಈ ಆಸರೆಯ ಗೂಡುಗಳು ಎರಡು ಪ್ರಕ್ಷೇಪ ಗೋಡೆಗಳ ಹೊರಭಾಗದಲ್ಲಿ ಕಂಡುಬರುವುದಿಲ್ಲ. ಈ ಪಡಸಾಲೆಯ ಉತ್ತರದ ಮುಂಭಾಗವನ್ನು ಮೂರು ಕಮಾನುಗಳು ಆಯತಾಕಾರದ ಸಮತಲದಲ್ಲಿದೆ. ಈ ಕಮಾನುಗಳು ಮೂರು ಸಮತಲಗಳನ್ನು ಹೊಂದಿದ್ದು ಚಪ್ಪಟೆಯಾದ ಅಂಚನ್ನು ಹೊಂದಿದೆ. ಕಮಾನುಗಳ ಮಧ್ಯ ಆಸರೆಗಳು ಮತ್ತು ಎರಡೂ ಬದಿಯ ಕೋಣೆಯಲ್ಲಿ ಗೋಡೆಯಿಂದ ಹೊರಚಾಚಿದ ಮೂರು ಕಲ್ಲುಗಳಿವೆ. (ಈಗ ಇವು ಶಿಥಿಲಗೊಂಡಿವೆ) ಉತ್ತರದ ಎರಡು ಗೋಡೆಗಳು ಅಲ್ಲಲ್ಲಿ ಪ್ಲಾಸ್ಟರ್‌ನ ಪ್ರಕ್ಷೇಪ (Projection)ಗಳನ್ನು ಹೊಂದಿವೆ.

**ಒಳಭಾಗ :**

ಒಳಭಾಗದ ಕಮಾನಿನ ಕಂಬಗಳು ಸರಳವಾದ ದುಂಡನೆಯ ತೆರವುಗಳನ್ನು ಹೊಂದಿವೆ. ಅವುಗಳ ಮೇಲೆ ಚೂಪಾದ ಅಂಚುಗಳಿವೆ. ಈ ಕಮಾನಿನ ಮೂಲೆಗಳಲ್ಲಿ ಇಳಿಜಾರಿನ ರಚನೆಗಳಿವೆ. ಗುಮ್ಮಟಗಳ ರಚನೆ ಭಿನ್ನವಾಗಿದೆ. ವಿಭಾಗ ಬಿ ಮತ್ತು ಎಚ್‌ಗಳ ಗುಮ್ಮಟಗಳು ತುಂಬಾ ವಿಶಾಲವಾಗಿದೆ. ಈ ಗುಮ್ಮಟಗಳ ಮೇಲೆ ವಿಭಿನ್ನವಾದ ರಚನೆಯಾದ ಎಲೆ, ಬಳ್ಳಿಗಳು ಮೊದಲಾದ ಅಲಂಕಾರಗಳಿವೆ. ಕೇಂದ್ರದಲ್ಲಿ ಕಮಲದ ದಳಗಳು ರಚನೆ ಇದೆ. ಇನ್ನೊಂದು ಗುಮ್ಮಟಗಳ ಸುರಳಿಯಲ್ಲಿ (ವಿಭಾಗ a,c,e,g, & ,i) ಗುಮ್ಮಟಗಳು ಸರಳವಾಗಿವೆ. ಗುಮ್ಮಟಗಳ ಬುಡಗಳು (Drums) ಹಲವಾರು ಸುರಳಿಯ ರಚನೆಯನ್ನು ಹೊಂದಿವೆ.

ಇನ್ನು ಎರಡು ಗುಮ್ಮಟಗಳು ಹದಿನಾರು (d ಮತ್ತು f) ಅಂಚುಗಳನ್ನು ಹೊಂದಿದ ಅಲಂಕಾರವನ್ನು ಹೊಂದಿದೆ. ಇವುಗಳನ್ನು ಹದಿನಾರು ಭಾಗಗಳಿಂದ ಜೋಡಿಸಿದಂತೆ ಕಂಡುಬರುತ್ತದೆ.

ಇನ್ನೊಂದು ಗುಮ್ಮಟ (a) ದಲ್ಲಿ ಕೆಳಗಿನಿಂದ ಮೇಲೆ ಬಂದ ಅಲಂಕಾರಗಳು ಒಂದನ್ನೊಂದು ಕೂಡಿಸಿಕೊಂಡು ಅಲಂಕಾರವನ್ನು ಹೆಚ್ಚಿಸುತ್ತವೆ. ಪಕ್ಕದಲ್ಲಿರುವ ಕೋಣೆಗಳು ಕಮಾನುಗಳುಳ್ಳ ಗೂಡು ಮತ್ತು ಸಣ್ಣ ತೆರವುಗಳನ್ನು ಹೊಂದಿವೆ. ಒಂದನೆಯ ಕೋಣೆಯಲ್ಲಿ ಅನೇಕ ವ್ಯತ್ಯಾಸಗಳಿವೆ. ನೇರವಾದ ಅಂಚನ್ನು ಹೊಂದಿದ ಗೂಡು ಇದೆ ಮತ್ತು (j) ಕೋಣೆಯಲ್ಲಿ ಅಷ್ಟಭುಜದ ಗುಮ್ಮಟವಿದೆ.

ಈಶಾನ್ಯದ ಗುಮ್ಮಟದಲ್ಲಿ ೭.೫ ಮೀ ಮತ್ತು ೨ ಮೀ ಆಳದ ಪೂರ್ವ ಪಶ್ಚಿಮದ ಗೋಡೆ ಇದೆ. ಅದರ ಉತ್ತರ ಭಾಗದಲ್ಲಿ ದೊಡ್ಡ ಪ್ರಾರ್ಥನಾ ಗೋಪುರ ಗೂಡು ಇದೆ. ಆದರೆ ಈ ಲಕ್ಷಣ ಈ ಮಂಟಪಕ್ಕೆ ಹೇಗೆ ಹೊಂದಿಕೊಂಡಿದೆ (ಎಂಬುದು) ಸ್ಪಷ್ಟವಾಗಿಲ್ಲ.

## ೧೯. ಬಹುಗುಮ್ಮಟಗಳ ಕಾವಲು ಗೋಪುರ

ಆವರಣ ೭ರ ಈಶಾನ್ಯದ ಗೋಡೆಯ ಮೂಲೆಯಲ್ಲಿ ಗೋಡೆಗಳ ಮೇಲೆ ಈ ರಚನೆಯನ್ನು ನಿರ್ಮಿಸಲಾಗಿದೆ. ಇದರ ಮೂಲಕ ಪಶ್ಚಿಮ ಮತ್ತು ಉತ್ತರ ದಿಕ್ಕುಗಳ ಮೂಲಕ ರಾಜರ ಆಸ್ಥಾನದ ನಿಗಾ ವಹಿಸಬಹುದಾಗಿತ್ತು. ಗಚ್ಚಿನಿಂದ ಮಾಡಿದ ಗುಮ್ಮಟವು ಇನ್ನೊಂದು ದೊಡ್ಡ ಗೋಡೆಗೆ ಹೊಂದಿಕೊಂಡಿದ್ದು ಬಹುಶಃ ಇದನ್ನು ನಂತರ ನಿರ್ಮಿಸಿರಬಹುದು.

ಪೂರ್ವ ಗೋಡೆಯ ದಕ್ಷಿಣದ ಕೊನೆಯಲ್ಲಿರುವ ಮೆಟ್ಟಿಲುಗಳಿಂದ ತಲುಪಲು ಸಾಧ್ಯವಾಗುವಂತೆ ಅಲ್ಲಿ ಗುಮ್ಮಟದ ಕೋಣೆ ಇದೆ. ಪೂರ್ವದ ಗೋಡೆಯ ಉತ್ತರದ ತುದಿಯಲ್ಲಿ ಒಂದು ಗೂಡು (ಅಥವಾ ಕೋಣೆ ಇರಬಹುದು) ಇದೆ. ಆದರೆ ಅದನ್ನು ಪ್ರವೇಶಿಸಲು ಸಾಧ್ಯವಾಗದಂತೆ ಮುಚ್ಚಲಾಗಿದೆ.

ಮೇಲ್ಭಾಗವು ೩*೨ರ ವಿಭಾಗವನ್ನು ಹೊಂದಿದೆ. ಆಗ್ನೇಯದ ಮೂಲೆಯಲ್ಲಿ ಒಂದು ಸಣ್ಣ ಗೋಡೆಯನ್ನು ಸುತ್ತುವರಿದಂತೆ ಮೇಲ್ಅಂತಸ್ತು ಇದೆ. ಉತ್ತರದಲ್ಲಿ ಎರಡೂ ಸಣ್ಣ ಚೌಕಾಕಾರದ ಕೋಣೆಗಳಿವೆ. ಪೂರ್ವದ ಗೋಡೆಯಲ್ಲಿ ಎರಡು ಸಣ್ಣ ಕಿಟಕಿಗಳನ್ನು ಜೋಡಿಸಲಾಗಿದೆ. ಪಶ್ಚಿಮದಲ್ಲಿ ಮೂರು ಗುಮ್ಮಟಗಳನ್ನು ಕೋಣೆಗಳನ್ನು ಎತ್ತರದಲ್ಲಿ ನಿರ್ಮಿಸಲಾಗಿದೆ. ವಾಯವ್ಯದ ಚೌಕಾಕಾರದ ಕೋಣೆಯು ಕಿಟಕಿಗಳನ್ನು ದ್ವಾರಗಳನ್ನು ಮತ್ತು ಸಣ್ಣ ಪ್ರಾರ್ಥನಾ ಗೂಡುಗಳನ್ನು ಹೊಂದಿದೆ. ಮಧ್ಯದ ಕೋಣೆಯು ಪಶ್ಚಿಮಕ್ಕಿದ್ದು ಆಯತಾಕಾರದಲ್ಲಿದೆ. ದೊಡ್ಡ ಕಮಾನಿನ ಬಾಗಿಲು ಇದ್ದು ಅದು ಪೂರ್ವ ಮತ್ತು ಪಶ್ಚಿಮದಲ್ಲಿ ತೆರೆದುಕೊಂಡಿದೆ. ಉತ್ತರ ಮತ್ತು ದಕ್ಷಿಣದ ಗೋಡೆಯಲ್ಲಿಯೂ ಗೂಡುಗಳಿದ್ದು ನಂತರ ಇದಕ್ಕೆ ಕಮಾನುಗಳನ್ನು ಜೋಡಿಸಲಾಗಿದೆ. ಪಶ್ಚಿಮದಲ್ಲಿ ಉತ್ತರದ ತೆರೆದ ಪ್ರದೇಶವು ಹೊರಗೆ ಚಾಚಿಕೊಂಡಿದ್ದು ಬಾಲ್ಕನಿಯಂತೆ ತೆರೆದುಕೊಂಡಿದೆ.

### ಹೊರಭಾಗ :

ಕೆಳಗೆ ಇರುವ (ಗೋಡೆಯ ಕೆಳಭಾಗ) ಸಾದಾ ಇದೆ. (Plain) ಮೆಟ್ಟಿಲುಗಳ ದ್ವಾರದಲ್ಲಿ ಮಾತ್ರ ಆಯತಾಕಾರದ ಚೌಕಟ್ಟಿನ ರಚನೆ ಇದೆ. ಇದೇ ತೆರನಾದ ಇನ್ನೊಂದು ರಚನೆಯನ್ನು ಎರಡನೆಯ

ಅಂತಸ್ತಿನಲ್ಲಿ ಕಾಣಬಹುದು. ಉತ್ತರ ಮತ್ತು ಪಶ್ಚಿಮದ ಗೋಡೆಗಳು ಮೇಲೆ ಸಾಗಿದಂತೆ ಗೋಪುರಾಕೃತಿ (Taper)ಯನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ. ಉತ್ತರಕ್ಕೆ ಚಾಚಿಕೊಂಡಿರುವ ಬಾಲ್ಕನಿಯ ಕೆಳಗೆ ೬ ಆಸರೆ ಕಲ್ಲುಗಳನ್ನು ಅವುಗಳಲ್ಲಿ ಮೂರು ಕಚ್ಚಾ ಕಲ್ಲುಗಳು ಹೊರ ಚಾಚಿವೆ ಒಂದೊಮ್ಮೆ ಬಾಲ್ಕನಿಯನ್ನು ಇಟ್ಟಿಗೆ ಮತ್ತು ಪ್ಲಾಸ್ಟರ್‌ನಿಂದ ಮುಚ್ಚಲಾಗಿತ್ತು. ಪಶ್ಚಿಮದ ಬಾಲ್ಕನಿಯ ಕೆಳಗೆ ಹೊರ ಚಾಚಿಕೊಂಡಿರುವ ಕಲ್ಲುಗಳು ವಿವಿಧ ರೀತಿಯಲ್ಲಿದೆ. ಇಲ್ಲಿಯೂ ಆಸರೆ ಗೋಡೆಗಳಿವೆ. ಅವುಗಳ ಕೆಳಗೆ ಅನೇಕ ಅಲಂಕಾರಗಳನ್ನು ಮಾಡಲಾಗಿದೆ. ಈಶಾನ್ಯದ ಕೋಣೆಯ ಮೂರು ಕಮಾನಿನ ಕಿಟಕಿಗಳನ್ನು ಹೊಂದಿದೆ. ಮಧ್ಯದ ಕಿಟಕಿಯು ದೊಡ್ಡದಿದೆ. ಪಶ್ಚಿಮದ ಸಣ್ಣ ಕಿಟಕಿಗಳಲ್ಲಿ ಇಟ್ಟಿಗೆಯ ರಚನೆಗಳನ್ನು ಕಾಣಬಹುದು ಉತ್ತರದ ಕಿಟಕಿಯನ್ನು ಮುಚ್ಚಲಾಗಿದೆ.

**ಒಳಭಾಗ :**

ಒಳಭಾಗದ ಕೋಣೆಗಳಲ್ಲಿ (ಮೇಲಂತಸ್ತಿನ ಕೋಣೆಗಳಲ್ಲಿ) ಸ್ತಂಭಗಳ ಮೇಲೆ ಅನೇಕ ಮೊನಚಾದ ಕಮಾನುಗಳುಳ್ಳ ದ್ವಾರ (ತೆರವುಗಳಿವೆ) ಪೂರ್ವದ ಮಧ್ಯದ ವಿಭಾಗದ ಮೇಲೆ ಅಷ್ಟಭುಜಾಕೃಯ ಗುಮ್ಮಟವಿದೆ. ಅದು ಸ್ವಲ್ಪ ಶಿಥಿಲಗೊಂಡಿದೆ. ಈ ಗುಮ್ಮಟದ ಕೆಳಗೆ ಅನೇಕ ಕೋನಾಕೃತಿಯ ರಚನೆಗಳನ್ನು ಮಾಡಲಾಗಿದೆ. ಪಶ್ಚಿಮದ ಕೇಂದ್ರದ ಗುಮ್ಮಟವು ವೃತ್ತಾಕಾರದಲ್ಲಿದೆ. ಅದರ ತಳದಲ್ಲಿ ಉಂಗುರದಾಕಾರದ ರಚನೆಯನ್ನು ಸಣ್ಣ ತೆರವುಗಳೊಂದಿಗೆ ಮಾಡಲಾಗಿದೆ. ನೈರುತ್ಯ ಮತ್ತು ವಾಯವ್ಯದ ಕೋಣೆಯ ಮೇಲಿನ ಗುಮ್ಮಟಗಳು ಅಷ್ಟಭುಜಾಕೃತಿಯಾಗಿದೆ. ಪೂರ್ವದ ಗೋಡೆಯಲ್ಲಿ ಸಣ್ಣ ತೆರವುಗಳಿದ್ದು ಅವುಗಳನ್ನು ರಕ್ಷಣಾ ಉದ್ದೇಶದಿಂದ ಬಳಸುತ್ತಿದ್ದರು. ಮೆಟ್ಟಿಲುಗಳ ಮೇಲೆ ಕಮಾನುಗಳುಳ್ಳ ಗೂಡುಗಳನ್ನು ಮಾಡಲಾಗಿದೆ.

**೨೦. ಶಿಥಿಲಗೊಂಡ ರಚನೆ (ಕಟ್ಟಡ)**

ಈ ಸ್ಮಾರಕವು ೭ರ ಸಮುಚ್ಚಯದ ಮಧ್ಯದಲ್ಲಿದೆ. ಈ ಸ್ಮಾರಕದಲ್ಲಿ ಕೇವಲ ಒಂದೇ ಒಂದು ಚೌಕಾಕಾರದ ಕೋಣೆಯಿದೆ. ಅದು ಬಹಳಷ್ಟು ಶಿಥಿಲಗೊಂಡಿದೆ. ನಾಲ್ಕು ದಿಕ್ಕಿನಲ್ಲಿ ಗೋಡೆಗಳಿದ್ದರೂ ಅವೆಲ್ಲ ಕುಸಿದು ಹೋಗಿವೆ. ನೆಲಹಾಸಾಗಲಿ ಅಥವಾ ಛತ್ತಾಗಲಿ ಉಳಿದಿಲ್ಲ ಅಥವಾ ಸರಿಯಾದ ತೆರವುಗಳಲ್ಲಿ ಅನೇಕ ಕಟ್ಟಡ ರಚನಾ ತಂತ್ರಗಳನ್ನು ಬಳಸಿ ಈ ಸ್ಮಾರಕವನ್ನು ನಿರ್ಮಿಸಿರಬಹುದು. ಕೆಳಭಾಗದಲ್ಲಿ ತುಂಬಾ ಗಟ್ಟಿಯಾದ ಮತ್ತು ಕಚ್ಚಾ ಕಲ್ಲುಗಳನ್ನು ಬಳಸಲಾಗಿದೆ. ಅಲ್ಲಲ್ಲಿ ಬಿರುಕುಗಳಲ್ಲಿ ಸಣ್ಣ ಸಣ್ಣ ಕಲ್ಲು ಚೂರುಗಳನ್ನು ಬಳಸಲಾಗಿದೆ. ನಂತರದ ಹಂತದಲ್ಲಿ ಚೆನ್ನಾಗಿ ಕೆತ್ತಲಾದ ಕಲ್ಲುಗಳನ್ನು ಕುಸುರಿಯಿಂದ ಜೋಡಿಸಿ ನಿರ್ಮಿಸಲಾಗಿದೆ. ಇದೇ ಲಕ್ಷಣವನ್ನು ಈ ಸ್ಮಾರಕದ ಸುತ್ತಲೂ ಕಾಣಬಹುದಾಗಿದೆ. ಮೂಲೆಗಳಲ್ಲಿ ಮೂರು ಭಾಗದ ವೃತ್ತಾಕಾರದಲ್ಲಿ ಅಡಿಪಾಯದ ಗೋಡೆಯನ್ನು ನಿರ್ಮಿಸಲಾಗಿದೆ. ಅದರ ಮೇಲೆ ವೃತ್ತಾಕಾರದಲ್ಲಿ ಗೋಡೆಯೊಳಗಿನ ಮೂಲೆಗಳ ಕಂಬಗಳನ್ನು ಕೂಡಿಸಲಾಗಿದೆ. ಒಂದೆರಡು ಥರ

(Course)ಗಳ ವರೆಗೆ ಮಾತ್ರ ಸ್ತಂಭಗಳಿವೆ. ಅಲ್ಲಿಂದ ಮುಂದೆ ಪ್ರತ್ಯೇಕವಾದ ಕಲ್ಲುಗಳನ್ನು ಉಪಯೋಗಿಸಲಾಗಿದೆ. ಇವುಗಳ ಶಿಥಿಲಗೊಂಡ ಭಾಗಗಳು ಹತ್ತಿರದಲ್ಲಿ ಬಿದ್ದಿವೆ. ಆದರೆ ಈ ಸ್ತಂಭಗಳ ರಚನೆ ಆಗ್ನೇಯದ ಮೂಲೆಯಲ್ಲಿ ಕಂಡುಬರುವುದಿಲ್ಲ. ಮೇಲ್ಭಾಗದ ಗೋಡೆಯನ್ನು ಗಟ್ಟಿಯಾದ ಆದರೆ ನಯವಾಗಿ ಮಾಡಿದ (Finished) ಕಲ್ಲುಗಳಿಂದ ನಿರ್ಮಿಸಲಾಗಿದೆ. ಅದನ್ನು ಬಹುಶಃ ಪುನರ್ ನಿರ್ಮಿಸಿರಬಹುದು. ಪಶ್ಚಿಮ ದಿಕ್ಕಿನ ಮಧ್ಯೆದ ಅಡಿಪಾಯದ ತೆರವುಗಳು ಎರಡೂ ಕಡೆ ತೆರೆದುಕೊಳ್ಳಲು ಅನುಕೂಲವಾಗುವಂತೆ ನಿರ್ಮಿತಗೊಂಡಿವೆ. ಇನ್ನು ಅನೇಕ ಕಲ್ಲುಬಂಡೆಗಳು ಕಂಡುಬಂದರೂ ಅವು ಬಿದ್ದು ಹೋಗಿವೆ ಅಥವಾ ಒಡೆದು ಹೋಗಿವೆ. ಕೋಣೆಯ ಒಳಗೆ ಒಂದು ಕುಸಿತು (ತಗ್ಗು) ಇದೆ. ಆದರೆ ಅದನ್ನು ಮುಚ್ಚಿಲ್ಲ. ತಳಹಾಸು (ನೆಲಹಾಸು Floor) ಇಲ್ಲ. ಅಲ್ಲಲ್ಲಿ ಬಿದ್ದು ಹೋಗಿರುವ ಗೂಡುಗಳನ್ನು ನೋಡಬಹುದು.

ಈ ಸ್ಮಾರಕದ ದಕ್ಷಿಣದಲ್ಲಿ ಒಂದು ಕಲ್ಲಿನ ಗೋಡೆಯಿದ್ದು ಅದು ಸಣ್ಣ ಕಾಲುದಾರಿ (Passage way) ಯನ್ನು ಉಂಟು ಮಾಡಿದೆ. ಇದರ (ಸ್ಮಾರಕ)ದ ಉತ್ತರದಲ್ಲಿ ಒಂದು ಮಣ್ಣು ಮತ್ತು ಕಚ್ಚಾ ಕಲ್ಲುಗಳಿಂದ ನಿರ್ಮಿಸಿದ ಗೋಡೆಯಿದೆ. ಈ ಸ್ಮಾರಕದ ಸುತ್ತಲೂ ಬಹಳಷ್ಟು ಕಲ್ಲು ಬಂಡೆಗಳು, ಗುಂಡುಗಳು, ಕಚ್ಚಾ ಕಲ್ಲುಗಳು ಬಿದ್ದಿವೆ.

## ೨೧. ದ್ವಾರದ ಮನೆ

ಸಮುಚ್ಚಯ ೭ರ ದಕ್ಷಿಣಕ್ಕೆ ಈ ಮಹಾದ್ವಾರದ ಮನೆಯು ಇದೆ. ಇದು ಸಣ್ಣ ಮತ್ತು ಚೌಕಕಾರದಲ್ಲಿದೆ. ಇದು ಬೇರೆ ಯಾವುದೇ ಕಟ್ಟಡಗಳೊಂದಿಗೆ ಜೋಡಣೆಗೊಂಡಿಲ್ಲ. ಪೂರ್ವ ಮತ್ತು ಪಶ್ಚಿಮದ ದ್ವಾರಗಳು ಕಮಾನಿನ ಆಕಾರದಲ್ಲಿವೆ. ಅವುಗಳ ಮೇಲೆ ಇಟ್ಟಿಗೆಯ ಗೂಡು ಇದೆ. ಈ ಗೂಡಿನ ಮೇಲ್ಭಾಗವು ಪಿರಾಮಿಡ್‌ನ ಆಕಾರದಲ್ಲಿದೆ. ಈ ಕಟ್ಟಡದ ಒಳಗೆ ಉತ್ತರ ಮತ್ತು ದಕ್ಷಿಣದಲ್ಲಿ ಪ್ರಾರ್ಥನಾ ಗೂಡುಗಳಿವೆ. ಈ ಸ್ಮಾರಕದ ಮೇಲ್ಭಾಗದ ಪ್ಲಾಸ್ಟರ್ ಉಳಿದಿಲ್ಲ.

## ೨೨. ಶಿಥಿಲಗೊಂಡ ಸ್ಮಾರಕ

ಸಮುಚ್ಚಯ ೭ರ ಈಶಾನ್ಯಕ್ಕೆ ಈ ಕಟ್ಟಡವನ್ನು ನಿರ್ಮಿಸಲಾಗಿದೆ. ಎತ್ತರದ ಮೇಲ್ಛಾವಣಿಯ ಮೇಲೆ ದಕ್ಷಿಣ ಮತ್ತು ಪೂರ್ವದ ಮಧ್ಯದಲ್ಲಿ ಆಯತಾಕಾರದ ಬಾಲ್ಕನಿಗಳಿವೆ. ಕಟ್ಟಡಗಳ ಮೂಲೆಯಲ್ಲಿ ಕಲ್ಲುಗಳಿಂದ ನಿರ್ಮಿಸಿದ ಗೋಡೆಯಲ್ಲಿರುವ ಕಂಬಗಳಿವೆ. ಆಗ್ನೇಯದಲ್ಲಿ ನಿರ್ಮಿಸಿದ ಮೆಟ್ಟಿಲುಗಳ ಸಹಾಯದಿಂದ ಮೇಲೆ ಹೋಗಲು ದಾರಿಯಿದೆ.

ಅಡಿಪಾಯದ ಗೋಡೆಗಳು ಸಾದಾ ಇವೆ. ಅಲ್ಲಿ ಅಡ್ಡಲಾಗಿರುವ ಪ್ರಕ್ಷೇಪಗಳಿವೆ. ದಕ್ಷಿಣ ಮತ್ತು ಪಶ್ಚಿಮದಲ್ಲಿ ನಾಲ್ಕು ಆಸರೆಯ ಗೂಡುಗಳನ್ನು ಮಾಡಲಾಗಿದ್ದು, ಅವು ಬಾಲ್ಕನಿಗೆ ಆಸರೆಯನ್ನು ನೀಡುತ್ತವೆ. ಈ ಆಸರೆಯ ಕಲ್ಲುಗಳು ದಪ್ಪವಾಗಿದ್ದು ಎಲೆಯಂತೆ ಬಾಗಿಕೊಂಡಿವೆ.

## ೨೩. ಚೌಕಾಕಾರದ ಕಾವಲು ಗೋಪುರ

ಸಮುಚ್ಚಯ ೧೪ರ ಆವರಣ ಗೋಡೆಯ ಎತ್ತರದ ಮೂಲೆಯಲ್ಲಿ ಈ ಗೋಪುರವನ್ನು ನಿರ್ಮಿಸಲಾಗಿದೆ. ಉತ್ತರ ಮತ್ತು ಪಶ್ಚಿಮದ ನೋಟ ಇದರಿಂದ ಸಾಧ್ಯವಾಗುತ್ತದೆ.

ಈ ಗೋಪುರದ ರಚನೆಯಲ್ಲಿ ಚೌಕಾಕಾರದ ನಿರ್ಮಾಣವಿದ್ದು, ಅದು ಮೆಟ್ಟಿಲುಗಳನ್ನು ಹೊಂದಿದೆ. ಕೆಳಭಾಗದಲ್ಲಿ ದೊಡ್ಡ ಕಿಟಕಿಗಳು ಮತ್ತು ಸಣ್ಣ ತೆರವುಗಳಿವೆ. ಮೇಲಿನ ಭಾಗದಲ್ಲಿ ಚೌಕಾಕಾರದ ಕೋಣೆಯು ಕಮಾನುಗಳನ್ನು ಹೊಂದಿದೆ. ಪ್ರತಿ ಕಮಾನು ಹೊರ ದಿಕ್ಕಿಗೆ (ಹೊರಗಡೆ) ಚಾಚಿಕೊಂಡಿದೆ. ಪ್ರತಿ ಕಮಾನಿನ ಬಾಲ್ಕನಿಗೆ ಎದುರಿನಲ್ಲಿ ಮೂರು ಮತ್ತು ಆಚೆ - ಈಚೆ ಎರಡು ಕಮಾನುಗಳ ತೆರವುಗಳಿವೆ. ಈ ಮಧ್ಯದ ಕೋಣೆಯ ನಾಲ್ಕು ಮೂಲೆಗಳಲ್ಲಿ ಸಣ್ಣ ಕಿಂಡಿಗಳನ್ನು ಬಿಡಲಾಗಿದೆ.

**ಹೊರಭಾಗ :**

ಮೇಲೆ ಸಾಗಿದಂತೆ ಗೋಪುರಾಕೃತಿಯಲ್ಲಿ ಸಾಗುವ ಮಾರ್ಗವು ಪಶ್ಚಿಮದಲ್ಲಿ ದ್ವಾರವನ್ನು ಹೊಂದಿದೆ. ಅಲ್ಲಲ್ಲಿ ಸಣ್ಣ ಚೌಕಾಕಾರದ ತೆರವುಗಳಿವೆ. ಮೇಲಿನ ಅಂತಸ್ತಿನ ಕೆಳಭಾಗದ ಗೋಡೆಯಲ್ಲಿ ಪ್ರಕ್ಷೇಪಗಳು ಸ್ವಲ್ಪ ಹೊರ ಚಾಚಿಕೊಂಡಿವೆ. ಉತ್ತರ ಮತ್ತು ದಕ್ಷಿಣದ ಬಾಲ್ಕನಿಗಳಿಗೆ ನಾಲ್ಕು ವಕ್ರವೈಷ್ಟ್ಯವುಳ್ಳ ಆಸರೆಗಳಿಂದ ಎತ್ತಿ ಹಿಡಿಯಲಾಗಿದೆ. ಈ ಆಸರೆಗಳಿಗೆ ಅಲಂಕಾರವಿದೆ. ಅವುಗಳ ಕೆಳಗೆ ಕಲ್ಲಿನ ಆಸರೆಗಳಿವೆ. ಅವುಗಳ ಮೇಲೆಯೂ ಸಹ ಕಮಾನುಗಳ ರಚನೆ ಇದೆ. ಗೋಪುರಕ್ಕೆ ಇಳಿಜಾರಿನ ತೊಲೆಗಳ ಆಸರೆ ಇದ್ದು ಬಹುಪಾಲು ನಾಶಗೊಂಡಿದೆ.

**ಒಳಭಾಗ :**

ಕಮಾನುಗಳುಳ್ಳ ಕಿಟಕಿಗಳನ್ನು ಹೊರತುಪಡಿಸಿ ಉಳಿದಂತೆ ಚೌಕಕಾರದ ಈ ಗೋಪುರ ಮಾರ್ಗವು ಸಾದಾ ಇದೆ. ಕೆಳಭಾಗದಲ್ಲಿ ಸಣ್ಣ ಪಿರಾಮಿಡ್ ಆಕೃತಿಯ ಗೂಡುಗಳಿವೆ. ಮೇಲಿನ ಕೋಣೆಯಲ್ಲಿರಬಹುದಾದ ಅಷ್ಟಭುಜಾಕೃತಿಯ ಗೂಡು ಸಹ ಕಾಣೆಯಾಗಿದೆ (Octagonal Missing) ಅಂಚಿನಲ್ಲಿ ಇದೆ ತೆರನಾದ ಆದರೆ ವಿಭಿನ್ನ ಗಾತ್ರದ ಅಷ್ಟಭುಜಾಕೃತಿಯ ಗೂಡುಗಳಿವೆ.

## ೨೪. ಶಿಥಿಲಗೊಂಡ ಕಾವಲು ಗೋಪುರ

ಸಮುಚ್ಚಯ ೧೪ (Enclosure xiv) ಗೋಡೆ ಗುಂಟ ಸಾಗಿದಂತೆ ಈಶಾನ್ಯದ ಕೊನೆಗೆ ಈ ಗೋಪುರವನ್ನು ನಿರ್ಮಿಸಲಾಗಿದೆ. ಈ ಗೋಪುರದ ಮೇಲ್ಭಾಗವು ಪೂರ್ತಿಯಾಗಿ ಬಿದ್ದುಹೋಗಿದ್ದು, ಕೆಳಗಿನ ಎರಡು ಅಂತಸ್ತು ಮಾತ್ರ ಉಳಿದುಕೊಂಡಿದೆ.

ನೆಲ ಹಂತದಲ್ಲಿ ನಾಲ್ಕು ವಿಭಾಗಗಳಲ್ಲಿ ಮೂರು ತೆರೆದುಕೊಂಡಿವೆ. ಈಶಾನ್ಯದ ವಿಭಾಗವನ್ನು ಮೆಟ್ಟಿಲುಗಳ ನಿರ್ಮಾಣಕ್ಕೆಂದು ಬಿಡಲಾಗಿದೆ. ಎರಡನೆಯ ಅಂತಸ್ತಿನಲ್ಲಿ ಮೆಟ್ಟಿಲುಗಳು ಕಟ್ಟಡದ ಮಧ್ಯಭಾಗಕ್ಕೆ ಬಂದಿವೆ. ಅಲ್ಲಿ ಒಂದು ಸಣ್ಣ ತೆರವು ಹಾದಿ (Corridar) ಇದ್ದು, ಅದು ಹಿಂಭಾಗದಲ್ಲಿದೆ. ದಕ್ಷಿಣ ಮತ್ತು ಪಶ್ಚಿಮದಲ್ಲಿ ಎರಡು ವಿಭಾಗಗಳಿವೆ. ಅದೇ ರೀತಿ ಮೇಲಿನ ಅಂತಸ್ತಿನಲ್ಲಿಯೂ ಸಹ ಇದೆ.

**ಹೊರಭಾಗ :**

ಕೆಳಭಾಗದಲ್ಲಿ ದಕ್ಷಿಣ ಮತ್ತು ಪಶ್ಚಿಮದಲ್ಲಿ ಎರಡು ಕಮಾನುಗಳ ಬಾಗಿಲುಗಳಿದ್ದು, ಅವುಗಳು ಚೂಪಾದ ತುದಿಯನ್ನು ಹೊಂದಿವೆ. ಈ ಕಮಾನುಗಳ ಅಂಚುಗಳು ನೇರವಾಗಿ ಆವರಣದ ಗೋಡೆಗೆ ಹೊಂದಿಕೊಂಡಿವೆ. ವೃತ್ತಾಕಾರದ ರಚನೆಯು ಆಸರೆಯ ಕಲ್ಲುಗಳಿದ್ದು ಅವು ಆಯತಾಕಾರದ ತೆರವುಗಳಿಗೆ ಆಸರೆ ನೀಡಿವೆ. ಮೊದಲನೆ ಅಂತಸ್ತಿನ ರಚನೆಯೂ ಸಹ ಕೆಳಭಾಗದಂತೆ ಇದ್ದರೂ ಸಹ ಅಲ್ಲಿ ವಿಭಾಗಗಳನ್ನು ಮುಚ್ಚಲಾಗಿದೆ. ಕಮಾನುಗಳ ಮಧ್ಯದ ಕಂಬಗಳು ಪ್ಲಾಸ್ಟರನ್ನು ಕಳೆದುಕೊಂಡಿವೆ. ಅದರ ಮೇಲೆ ಇರುವ ಇಳಿಜಾರಿನ ಛತ್ತು ಪೂರ್ತಿಯಾಗಿ ನಾಶಗೊಂಡಿದೆ.

**ಒಳಭಾಗ :**

ಅಷ್ಟಭುಜಾಕೃತಿಯ ಗುಮ್ಮಟವು ಅಲಂಕೃತ ತಳವನ್ನು (Drum) ಹೊಂದಿದ್ದು ಅದು ಈಶಾನ್ಯದ ನೆಲಭಾಗದಿಂದಲೇ ಎದ್ದಿದೆ ಅಲ್ಲಲ್ಲಿ ಸರಳ ಗೂಡುಗಳನ್ನು ನಿರ್ಮಿಸಲಾಗಿದೆ. ಮೆಟ್ಟಿಲುಗಳ ಮೇಲೆ ಕಮಾನಿನಾಕೃತಿಯ ಛತ್ತು ಇದೆ.

**೨೫. ಚೌಕಕಾರದ ಕಾವಲು ಗೋಪುರ**

ಸಮುಚ್ಚಯ ೧೪ರ ಪ್ರಕಾರದ ಗೋಡೆಯ ಉತ್ತರದಲ್ಲಿ ಈ ಗೋಪುರವನ್ನು ನಿರ್ಮಿಸಲಾಗಿದೆ. ಇದರ ಮೂಲಕ ಉತ್ತರ ಮತ್ತು ಪೂರ್ವದ ವೀಕ್ಷಣೆ ಸಾಧ್ಯ. ಉತ್ತರ ಮತ್ತು ಪೂರ್ವದ ಗೋಡೆಗಳು ಸೇರಿಕೊಂಡಿರುವ ಈ ಭಾಗವನ್ನು ಗಮನಿಸಿದಾಗ ಅದು ನಂತರದ ಸೇರ್ಪಡೆ ಎಂಬುದು ತಿಳಿಯುತ್ತದೆ.

ಈ ಗೋಪುರದ ಮಧ್ಯದಲ್ಲಿ ಚೌಕಾಕಾರದ ಇದು ಅದು ಮೇಲಂತಸ್ತಿನ ಮೆಟ್ಟಿಲುಗಳವರೆಗೆ ಇದೆ. ಕೆಳಭಾಗದಲ್ಲಿ ದೊಡ್ಡ ಕಿಟಕಿಗಳನ್ನು ಮೇಲ್ಭಾಗದಲ್ಲಿ ಸಣ್ಣ ಕಿಟಕಿಗಳನ್ನು ಇಡಲಾಗಿದೆ. ಮೇಲ್ಭಾಗದಲ್ಲಿ ಚೌಕಾಕಾರದ ಕೋಣೆಯು ಪ್ರತಿ ದಿಕ್ಕಿನ ಮಧ್ಯದಲ್ಲಿ ಬಾಲ್ಕನಿಗಳನ್ನು ಹೊಂದಿದೆ. ಪ್ರತಿ ಬಾಲ್ಕನಿಯಲ್ಲಿ ಮೂರು ಕಮಾನುಗಳುಳ್ಳ ತೆರುವುಗಳಿವೆ. ಆದರೆ ಪಶ್ಚಿಮ ಮತ್ತು ಪೂರ್ವದ ಬಾಲ್ಕನಿಗಳು ಸರಿಯಾದ ಸ್ಥಿತಿಯಲ್ಲಿ ಉಳಿದಿಲ್ಲ. ನಾಲ್ಕು ಮೂಲೆಗಳಲ್ಲಿ ಎರಡು ಕಮಾನುಗಳುಳ್ಳ ಗೂಡುಗಳನ್ನು ಬಿಡಲಾಗಿದೆ.

**ಹೊರಭಾಗ :**

ಸಾಪಾದ ತೊಲೆ ಭಾಗವು ಬಾಗಿಲು ಬಿಳಿ ಮಾತ್ರ ಬಿಟ್ಟುಕೊಂಡಿದೆ (ಅದು ಪಶ್ಚಿಮದಲ್ಲಿ ಮುಖ್ಯ ಬಾಗಿಲನ್ನು ಹೊಂದಿದೆ). ಮೇಲೆ ಹೋದಂತೆ ಕಮಾನುಗಳುಳ್ಳ ಕಿಟಕಿಗಳು ಚೌಕಾಕಾರದ ತೆರವುಗಳಿವೆ. ಮೇಲಿನ ಕೋಣೆಯ ಗೋಡೆಯ ಹೊರಕ್ಕೆ ಚಾಚಿಕೊಂಡಿದೆ. ಉತ್ತರ ಮತ್ತು ದಕ್ಷಿಣದ ಬಾಲ್ಕನಿಗಳು ಸುಸ್ಥಿತಿಯಲ್ಲಿದೆ. ಅವುಗಳು ಕೆಳಗೆ ಆಸರೆಯ ಕಲ್ಲುಗಳನ್ನು ಹೊಂದಿವೆ. ಈ ಆಸರೆಯ ಕಲ್ಲುಗಳಿಗೆ ಹಲವಾರು ಚಿತ್ತಾರಗಳನ್ನು ಮಾಡಲಾಗಿದೆ. ಕಮಾನುಗಳ ತೆರವುಗಳ ಕೆಳಗೂ ಸಹ ಕಲ್ಲಿನ ಆಸರೆಯನ್ನು ನೀಡಲಾಗಿದೆ. ಗೋಪುರಕ್ಕೆ ಇಳಿಜಾರಿನ ಛಾವಣಿಯ ಆಸರೆ ಇದೆ. ಆಸರೆ ಎಲ್ಲ ಭಾಗವು ಉಳಿದಿಲ್ಲ. ಅದರ ಮೇಲೆ ಇಟ್ಟಿಗೆಯಲ್ಲಿ ನಿರ್ಮಿಸಿದ ರಚನೆ ಇದೆ.

**ಒಳಭಾಗ :**

ಕಮಾನುಗಳುಳ್ಳ ಕಿಟಕಿಗಳನ್ನು ಹೊರತುಪಡಿಸಿ ಮತ್ತು ಉತ್ತರದಲ್ಲಿರುವ ಗೂಡುಗಳು ಇವುಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಭಾಗಗಳು ಯಾವುದೇ ಅಲಂಕಾರ ಇಲ್ಲ ಸಣ್ಣ ಸಣ್ಣ ಪಿರಾಮಿಡ್ ಆಕಾರದ ಗೂಡುಗಳನ್ನು ನಿರ್ಮಿಸಲಾಗಿದೆ. ಮೇಲ್ಭಾಗದ ಕೋಣೆಯ ತನ್ನ ಗೂಡನ್ನು ಕಳೆದುಕೊಂಡಿದೆ. (ಬಿದ್ದು ಹೋಗಿದೆ) ಬಾಲ್ಕನಿಯ ಒಳಗೂ ಸಹ ಪಿರಾಮಿಡ್ ಆಕಾರದ ಗೂಡುಗಳಿವೆ.

**೨೬. ಶಿಥಿಲಗೊಂಡ ಕಾವಲು ಗೋಪುರ**

ಆವರಣ ಗಳಿಕ್ಕೆ ಹೊಂದಿಕೊಂಡಂತೆ ಈಶಾನ್ಯದ ಮೂಲೆಯಲ್ಲಿ ಈ ಗೋಪುರ ಇದೆ. ಈ ಕಟ್ಟಡದ ಕೆಳಭಾಗದ ಎರಡು ಅಂತಸ್ತುಗಳು ಮಾತ್ರ ಉಳಿದಿವೆ. ಮೇಲ್ಭಾಗ ಕುಸಿದು ಹೋಗಿದೆ.

ಕೆಳ ಅಂತಸ್ತಿನ ನಾಲ್ಕು ಭಾಗಗಳಲ್ಲಿ ಮೂರು ಭಾಗಗಳು ತೆರೆದಿವೆ. ಈಶಾನ್ಯದ ಮೂಲೆಯಲ್ಲಿ ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಮೊದಲನೆಯ ಅಂತಸ್ತಿನಲ್ಲಿ ಮೆಟ್ಟಿಲುಗಳು ಗೋಪುರದ ಮಧ್ಯಭಾಗಕ್ಕೆ ಸರಿದಿದೆ. ಅಲ್ಲಿ ಸಣ್ಣ ಸ್ಥಳವನ್ನು ಕಾವಲುದಾರಿ ಬಳಸಲಾಗಿದೆ. ಎರಡನೆಯ ಅಂತಸ್ತಿನಲ್ಲಿಯೂ ಇದೆ. ಮಾದರಿಯಯನ್ನು ಅನುಸರಿಸಲಾಗಿದೆ. ಆದರೆ ಅದು ಶಿಥಿಲಗೊಂಡಿದೆ.

**ಒಳಭಾಗ :**

ಅಷ್ಟಭುಜಾಕೃತಿಯ ಗುಮ್ಮಟವನ್ನು ಅಲಂಕೃತಗೊಳಿಸಿದ ಬುಡದ ಮೇಲೆ ನಿರ್ಮಿಸಲಾಗಿದೆ. ಗುಮ್ಮಟವು ಈಶಾನ್ಯದ ವಿಭಾಗದ ಮೇಲೆ ಇದೆ. ಉಳಿದ ವಿಭಾಗಗಳು ಮೇಲೆ ಸರಳವಾದ ಗೂಡುಗಳನ್ನು ನಿರ್ಮಿಸಲಾಗಿದೆ. ಮೆಟ್ಟಿಲುಗಳ ಮೇಲೂ ಸಹ ಕೋನಾಕೃತಿಯ ಕಮಾನುಗಳುಳ್ಳ ಛತ್ತನ್ನು ನಿರ್ಮಿಸಿದೆ.

**ಹೊರಭಾಗ :**

ನೆಲ ಅಂತಸ್ತಿನಲ್ಲಿ ಎರಡು ಬಾಗಿಲುಗಳಿದ್ದು ಅವುಗಳು ಚೂಪಾದ ಕಮಾನುಗಳನ್ನು ಹೊಂದಿವೆ. ಅವು ದಕ್ಷಿಣ ಮತ್ತು ಪಶ್ಚಿಮದಲ್ಲಿದೆ. ಮೂಲೆಯಲ್ಲಿ ಕಮಾನುಗಳು ನೇರವಾಗಿ ಗೋಡೆಯಿಂದ

ಮೂಡಿಬಂದಿವೆ. ನಿರ್ಮಿಸಲ್ಪಟ್ಟಿವೆ. ಅಲ್ಲಲ್ಲಿ ಆಸರೆಗಾಗಿ ವೃತ್ತಾಕಾರದ ಛತ್ತಿನ ಮಾದರಿಯನ್ನು ನಿರ್ಮಿಸಲಾಗಿದೆ. ಮೊದಲನೆಯ ಅಂತಸ್ತಿನಲ್ಲಿಯೂ ಚೂಪಾದ ಕಮಾನುಗಳ ಬಾಗಿಲು ಇವೆ. ಆದರೆ ವಿಭಾಗಗಳನ್ನು ಮುಚ್ಚಲಾಗಿದೆ. ಅಲ್ಲಲ್ಲಿ ಇಟ್ಟಿಗಿಯಿಂದ ನಿರ್ಮಿಸಲಾದ ಸ್ತಂಭಗಳಿದ್ದು ಅವುಗಳ ಮೇಲಿನ ಇಟ್ಟಿಗಿಯ ಕೆಲಸದ ಕೆಲವು ಭಾಗಗಳು ಮಾತ್ರ ಉಳಿದುಕೊಂಡಿವೆ. ಮೆಲ್ಭಾಗ ಸಂಪೂರ್ಣವಾಗಿ ಮಾಯವಾಗಿದೆ.

## ೨೭. ಅಷ್ಟಭುಜಾಕೃತಿಯ ಗೋಪುರ

ಆವರಣ ೧೪ರ ಈಶಾನ್ಯದ ಮೂಲೆಯಲ್ಲಿ ಇದನ್ನು ನಿರ್ಮಿಸಲಾಗಿದೆ. ಇದು ಅರಸರ ಕೇಂದ್ರಸ್ಥಾನವನ್ನು ಪೂರ್ವ ಮತ್ತು ದಕ್ಷಿಣದ ವೀಕ್ಷಣೆಗೆ ಸಹಕಾರಿಯಾಗಿದೆ. ಈ ಗೋಪುರ ಆವರಣದ ಗೋಡೆಗಿಂತ ಮೊದಲೇ ನಿರ್ಮಿತವಾದದ್ದು ಎಂಬುದು ನಿಸ್ಸಂದೇಹವಾಗಿ ತಿಳಿಯುತ್ತದೆ.

ನೆಲ ಅಂತಸ್ತಿನಲ್ಲಿ ಈಶಾನ್ಯದಲ್ಲಿ ಈ ಗೋಪುರವನ್ನು ಪ್ರವೇಶಿಸಲು ದ್ವಾರವಿದೆ. ಅಲ್ಲಿ ನಿಜವಾದ (ಮೂಲ) ಅಡಿಪಾಯವು ನಂತರದ ದಿನಗಳಲ್ಲಿ ಮುಚ್ಚಿ ಹೋಗಿದೆ. ಮೊದಲನೆಯ ಮತ್ತು ಎರಡನೆಯ ಹಂತದಲ್ಲಿ ವೃತ್ತಾಕಾರದ ಮೆಟ್ಟಿಲುಗಳಿದ್ದು ಅವುಗಳ ಸುತ್ತಲೂ ಅಷ್ಟಭುಜಾಕೃತಿಯಲ್ಲಿ ಕಾರಿಡಾರನ್ನು ಬಿಡಲಾಗಿದೆ. ಅವುಗಳಲ್ಲಿ ಪರಸ್ಪರ ಛೇದಿಸುವ ಕಮಾನುಗಳು ಒಟ್ಟು ಎಂಟು ವಿಭಾಗದಲ್ಲಿವೆ. ಪ್ರತಿ ವಿಭಾಗದಲ್ಲಿ ಒಂದು ಸಣ್ಣ ಕಿಟಕಿಯನ್ನು ಬಿಡಲಾಗಿದೆ. ದಕ್ಷಿಣ ಮತ್ತು ಪೂರ್ವದಲ್ಲಿ ಆವರಣ ಗೋಡೆಯಿದ್ದು ಅದು ಗೋಪುರವನ್ನು ಮುಚ್ಚಿದೆ. ಮೂರನೆಯ ಮತ್ತು ಕೊನೆಯ ಅಂತಸ್ತಿನಲ್ಲಿ ಮೆಟ್ಟಿಲುಗಳನ್ನು ನಾಲ್ಕು ಕಂಬಗಳ ಮಧ್ಯೆ ನಿರ್ಮಿಸಲಾಗಿದೆ. ಅದರ ಸುತ್ತಲೂ ಹದಿನಾರು ಎತ್ತರದ ಸ್ಥಳ (ಕಟ್ಟೆ)ಗಳನ್ನು ಮಾಡಲಾಗಿದೆ. ಹೊರಭಾಗದಲ್ಲಿ ಎತ್ತರದ ಕಮಾನುಗಳು ಮತ್ತು ಹೊರ ಚಾಚಲ್ಪಟ್ಟ ಕಿಟಕಿಗಳಿವೆ.

**ಹೊರಭಾಗ :**

ಈ ಸ್ಮಾರಕ ಸಂಪೂರ್ಣವಾಗಿ ಅಷ್ಟಭುಜಾಕೃತಿಯಲ್ಲಿದ್ದು. ನೆಲ ಅಂತಸ್ತು ಕಮಾನುವುಳ್ಳ ದ್ವಾರವನ್ನು ಹೊರತುಪಡಿಸಿ ಯಾವುದೇ ಅಲಂಕಾರ ವಿಶೇಷತೆಯನ್ನು ಹೊಂದಿಲ್ಲ. ೫ ಸಾದಾ ಪ್ರಕ್ಷೇಪಗಳು ಮೊದಲೆಯ ಅಂತಸ್ತಿಗೆ ಪ್ರವೇಶ ನೀಡುತ್ತವೆ. ಮೊದಲನೆಯ ಅಂತಸ್ತಿನ ಗೋಡೆಗಳು ಚೂಪಾಕಾರವಾಗುತ್ತ ಅಲ್ಲಲ್ಲಿ ಸಣ್ಣ ಚೌಕಾಕಾರದ ತೆರವುಗಳನ್ನು ಹೊಂದಿವೆ. ಎರಡನೆಯ ಅಂತಸ್ತಿನಲ್ಲಿ ಕೋನಾಕಾರದ ಕಮಾನುಗಳಿವೆ. ಗೋಡೆಯ ಮಧ್ಯದಲ್ಲಿಯೂ ಸಹ ಎರಡು ಸಮತಲದಲ್ಲಿರುವ ಕಿಟಕಿಗಳು ಮತ್ತು ಸಣ್ಣ ಬಾಲ್ಕನಿಗಳನ್ನು ನಿರ್ಮಿಸಲಾಗಿದೆ. ಅವುಗಳ ಕೆಳಗೆ ಆಸರೆಗಾಗಿ ಹೊರ ಚಾಚಲ್ಪಟ್ಟ ಗೋಡೆಯನ್ನು ನಿರ್ಮಿಸಲಾಗಿದೆ. ಮೆಲ್ಭಾಗದಲ್ಲಿ ಎಂಟು ಪ್ರತ್ಯೇಕ ಎತ್ತರದ ಗೋಡೆಗಳನ್ನು ನಿರ್ಮಿಸಲಾಗಿದೆ. ಈ ಗೋಪುರದ ಛಾವಣಿಯೂ ಸಹ ಅಷ್ಟಭುಜಾಕೃತಿಯಲ್ಲಿದೆ ಮತ್ತು ಮೂರು ಇಳಿಮುಖದ ಮತ್ತು

ಆರೋಹಣ ಹಂತಗಳ ಇಳಿಜಾರಿನ ಭಾವಣಿಯನ್ನು ಹೊಂದಿದೆ. ಗೋಪುರದ ಮೇಲ್ಭಾಗದಲ್ಲಿ ಗೋಲಾಕಾರದ ಆಕೃತಿ ಇದೆ.

**ಒಳಭಾಗ :**

ಕೋನಾಕಾರದ ಕಮಾನುಗಳುಳ್ಳ ಒಳಭಾಗದಲ್ಲಿ ಕಾಣಬಹುದಾದ ಮೆಟ್ಟಿಲು ಮಾರ್ಗದಲ್ಲಿ ಚೂಪಾದ ಮೇಲ್ಭಾಗದ ಗೂಡುಗಳನ್ನು ಕಾಣಬಹುದು. ಮೆಟ್ಟಿಲು ಮಾರ್ಗದ ಮೇಲಿನ ಗುಮ್ಮಟವು ಯಾವುದೇ ಅಲಂಕಾರವನ್ನು ಹೊಂದಿಲ್ಲ. ಅದರ ಹಿಂದೆ ಮತ್ತೊಂದು ವೃತ್ತಾಕಾರದ ಗುಮ್ಮಟದ ಬುಡ ಇದೆ. ಮೂಲ ಸ್ವರೂಪದ ಪ್ಲಾಸ್ಟರನ್ನು ಕಾಣಬಹುದು.

**೨೮. ಚೌಕಾಕಾರದ ಜಲಮಂಟಪ (ಪುಷ್ಕರಣಿ ಅಥವಾ ಕಲ್ಯಾಣಿ)**

ಆವರಣ ೧೪ರ ಈಶಾನ್ಯದ ಮೂಲೆಯಲ್ಲಿ ಈ ಮಂಟಪವನ್ನು ನಿರ್ಮಿಸಲಾಗಿದೆ. ಈ ಸ್ಮಾರಕವು ನಾಲ್ಕು ಕಡೆ ನೀರಿನ ಕಾಲುವೆಗಳಿಂದ ಸುತ್ತುವರಿಯಲ್ಪಟ್ಟಿದೆ. ಈಗ ಈಶಾನ್ಯ ಮತ್ತು ದಕ್ಷಿಣದ ದ್ವಾರಗಳಲ್ಲಿ ಈ ಕಾಲುವೆಯನ್ನು ಮುಚ್ಚಲಾಗಿದೆ. ಒಂದು ಕಾಲುವೆಯು ಈ ಜಲ ಮಂಟಪಕ್ಕೆ ನೀರನ್ನು ತಂದು ಕೇಂದ್ರ ಚೌಕಾಕಾರದ ಪ್ರದೇಶದಲ್ಲಿ ತುಂಬಿಸುತ್ತಿತ್ತು. ಕೇಂದ್ರದಲ್ಲಿ ೨೪ ಚೌಕಾಕಾರದ ಗೂಡುಗಳ ವಿಭಾಗಗಳಿವೆ. ಪ್ರತಿ ವಿಭಾಗವು ಪ್ರತ್ಯೇಕವಾದ ಕಂಬಗಳಿಂದ ಬೇರ್ಪಟ್ಟಿದೆ. ಈ ವಿಭಾಗದ ಹೊರ ಗೋಡೆಯಲ್ಲಿ ಸಣ್ಣ ಕಿಟಕಿಗಳನ್ನು ನಿರ್ಮಿಸಲಾಗಿದೆ. ಮೆಟ್ಟಿಲು ಮಾರ್ಗಕ್ಕೆ ದಕ್ಷಿಣ ಗೋಡೆಯಲ್ಲಿ ದ್ವಾರವನ್ನು ಬಿಡಲಾಗಿದೆ. ಮೆಟ್ಟಿಲು ಮಾರ್ಗಕ್ಕೆ ದಕ್ಷಿಣ ಗೋಡೆಯಲ್ಲಿ ದ್ವಾರವನ್ನು ಬಿಡಲಾಗಿದೆ. ಇದರ ಎದುರಿನಲ್ಲಿ ಚೌಕಾಕಾರದ ಛಾವಣಿ ಇಲ್ಲದ ಅಂಗಣ ಇದ್ದು ಅದರಲ್ಲಿ ಎತ್ತರದ ಆಸನ ಮಾದರಿಯ ವ್ಯವಸ್ಥೆ ಇದೆ. ಕೊನೆಯ ಎರಡು ವಿಭಾಗಗಳಲ್ಲಿ ಕೇವಲ ಬಾಲ್ಕನಿಗಳಿಗೆ ಆಸರೆ ನೀಡುವ ಕಲ್ಲುಗಳು (ಹೊರಚಾಚಿದ) ಮಾತ್ರ ಉಳಿದಿವೆ.

**ಹೊರಭಾಗ :**

ಹೊರಭಾಗವು ತನ್ನ ಮೂಲ ಸ್ವರೂಪವನ್ನು ಉಳಿಸಿಕೊಂಡಿಲ್ಲ. ಎಲ್ಲವನ್ನು ಪುನರ್ ನಿರ್ಮಿಸಲಾಗಿದೆ. ದಕ್ಷಿಣದಲ್ಲಿ ಅಲಂಕೃತ ದ್ವಾರವನ್ನು ಬಿಡಲಾಗಿದೆ. ಅದರ ಜೊತೆಗೆ ಬಾಲ್ಕನಿಯನ್ನು ಸಹ ನಿರ್ಮಿಸಲಾಗಿದೆ. ಮಧ್ಯದಲ್ಲಿ ಆಯತಾಕಾರದ ಮೂರು ಸರಳ ಕಮಾನುಗಳು ಮೂರು ದಿಕ್ಕಿನಲ್ಲಿವೆ. ಪಶ್ಚಿಮದಲ್ಲಿರುವ ಕಮಾನುಗಳನ್ನು ಗಮನಿಸಿದಾಗ ಅಲ್ಲಿಯೂ ಸಹ ಒಂದು ಬಾಲ್ಕನಿ ಇರುವ ಸಾಧ್ಯತೆ ಕಂಡಬರುತ್ತದೆ. ಜೋಡಿ ಕಲ್ಲುಗಳಲ್ಲಿ ನಿರ್ಮಿಸಿದ ಆಸರೆಯನ್ನು ನೋಡಿದಾಗ ಇಳಿಜಾರಿನ ಛಾವಣಿ ಇರುವುದೂ ಸಹ ಕಂಡುಬರುತ್ತದೆ.

**ಒಳಭಾಗ :**

ಒಳಭಾಗದ ಕಾರಿಡಾರ್‌ನಲ್ಲಿ ಕಮಾನುಗಳು ನಿಯಮಿತವಾಗಿ ಎರಡು ಸಮತಲಗಳಲ್ಲಿ ನಿರ್ಮಿತಗೊಂಡಿವೆ. ೨೪ ವಿಭಾಗಗಳ ಮೇಲೆ ಬಹು ವಿಧ ಅಲಂಕಾರವಿದ್ದರೂ ಸಹ, ಒಟ್ಟಾರೆಯಾಗಿ

ಸಮಮಿತಿಯಲ್ಲಿ ನಿರ್ಮಿಸಲ್ಪಟ್ಟ ಗುಮ್ಮಟಗಳನ್ನು ಕಾಣಬಹುದು. ಮುಖ್ಯವಾಗಿ ಮಧ್ಯದ ವಿಭಾಗದ ಮೇಲೆ ವಿಶೇಷವಾದ ವಿಸ್ತಾರವಾದ ಯೋಜನೆಯಲ್ಲಿ ಅಲಂಕಾರ ಮಾಡಲಾಗಿದೆ. ಅಷ್ಟಭುಜಾಕೃತಿಯ ಅಥವಾ ವೃತ್ತಾಕಾರದ ಗುಮ್ಮಟ ಬುಡಗಳು ಅಥವಾ ಗೂಡುಗಳನ್ನು ನಿರ್ಮಿಸಲಾಗಿದೆ.

ಒಳಗಾಗಿರುವ ಮತ್ತೊಂದು ಪ್ರಮುಖ ಲಕ್ಷಣ ಎಂದರೆ ಮೆಟ್ಟಿಲು ಮಾರ್ಗಕ್ಕೆ ನಿರ್ಮಿಸಲಾದ ಕಮಾನಿನ ದ್ವಾರ ಕಿಟಕಿಗಳು ಅಲ್ಲಲ್ಲಿ ವಿವಿಧ ಹಂತಗಳ ಸರಣಿ ಗೂಡುಗಳನ್ನು ಸಹ ನಿರ್ಮಿಸಲಾಗಿದೆ.

**೨೯. ಅಷ್ಟಭುಜಾಕೃತಿಯ ಜಲ ಕಾರಂಜಿ**

ಆವರಣ ೧೪ರ ಆಗ್ನೇಯ ಮೂಲೆಯಲ್ಲಿ ಈ ಸಣ್ಣ ಕಾರಂಜಿಯನ್ನು ನಿರ್ಮಿಸಲಾಗಿದೆ. ಇಟ್ಟಿಗಿ ಮತ್ತು ಗಾರೆಯಲ್ಲಿ ನಿರ್ಮಿಸಲಾದ ದಪ್ಪವಾದ ಮಣ್ಣಿನ ಕೊಳವೆಗಳನ್ನು ಕಾಣಬಹುದಾಗಿದೆ.

ಅಷ್ಟಭುಜಕೃತಿಯಲ್ಲಿರುವ ಮಧ್ಯದ ಕಟ್ಟಡದಲ್ಲಿ ಸಣ್ಣ ಬೇಸಿನ ನನ್ನು ಪ್ಲಾಸ್ಟರ್‌ನಲ್ಲಿ ನಿರ್ಮಿಸಲಾಗಿದೆ. ಬೇಸಿನ ತಳಭಾಗ ಚೌಕಕಾರದಲ್ಲಿದರೆ ಮೇಲ್ಭಾಗವು ಅಷ್ಟಭುಜಾಕೃತಿಯಲ್ಲಿದೆ. ಅದಕ್ಕೆ ಹನ್ನೆರಡು ಕೊಳವೆಯಾಕಾರದ ಚಿತ್ತಾರವಿದೆ. ಈ ಬೇಸಿನನ ಕೆಳಭಾಗದಲ್ಲಿ ಬಹುಶಃ ಕಾರಂಜಿ ಇರಬಹುದು ಅದಕ್ಕೆ ಬೇಕಾದ ನೀರನ್ನು ನೆಲದ ಮೇಲಿರುವ ಕೊಳವೆಗಳ ಮೂಲಕ ನೀರನ್ನು ಪೂರೈಸಲಾಗುತ್ತಿತ್ತು. ಈ ಬೇಸಿನಲಿ ಆಯತಾಕಾರದ ಒಂದೇ ಗ್ರಾನೈಟ್‌ನಲ್ಲಿ ಬೇಸಿನನ್ನು ನಿರ್ಮಿಸಿ ಅದನ್ನು ಹತ್ತಾರದಲ್ಲಿ ದಕ್ಷಿಣದಲ್ಲಿ ಇಡಲಾಗಿದೆ.

ಕೇಂದ್ರದ, ಅನಿಯಮಿತ ಅಷ್ಟಭುಜಾಕೃತಿಯ ಕೋಣೆಯ ಮೂಲೆಗಳಲ್ಲಿ ದ್ವಾರಗಳನ್ನು ಬಿಡಲಾಗಿದೆ. ಈ ಕೋಣೆಯ ಸುತ್ತಲೂ ಕಾಲುದಾರಿಯನ್ನು ನಿರ್ಮಿಸಿದ್ದಾರೆ. ಎಂಟು ಕಂಬಗಳ ಮಧ್ಯದಲ್ಲಿ ಕಮಾನುಗಳ ದ್ವಾರಗಳಿವೆ.

**ಹೊರಭಾಗ :**

ಗೋಡೆಗಳು ಬಹಳಷ್ಟು ಪುನರ್ ನಿರ್ಮಿಸಲಾಗಿದೆ. ಎರಡು ಸಮತಲದಲ್ಲಿ ಕಮಾನುಗಳನ್ನು ನಿರ್ಮಿಸಲಾಗಿದೆ. ಸಣ್ಣ ಕೋನಾಕಾರದ ಇಳಿಜಾರಿನ ಛತ್ತಿಗೆ ಆಸರೆಯಾಗಿ ಅಲ್ಲಲ್ಲಿ ಆಸರೆ ಗೋಡೆಗಳನ್ನು ನಿರ್ಮಿಸಲಾಗಿ. ಅಲ್ಲಿ ಒಂದು ಸಣ್ಣ ಗೋಡೆಯನ್ನು ಸಹ ನಿರ್ಮಿಸಲಾಗಿದೆ. ಗುಮ್ಮಟದ ಮೇಲಿನ ಅಲಂಕಾರದ ಕಿರುಪಟ್ಟಿ ಉಳಿದಿಲ್ಲ.

**ಒಳಭಾಗ :**

ಚೂಪಾದ ಕಮಾನುಗಳ ತೆರವುಗಳನ್ನು ಎರಡು ಸಮತಲದಲ್ಲಿ ನಿರ್ಮಾಣಗೊಂಡಿದೆ. ಇದು ಕೇಂದ್ರದ ಕೋಣೆಯ ನಾಲ್ಕು ದಿಕ್ಕಿನಲ್ಲಿ ಕಂಡುಬರುತ್ತದೆ. ಮಧ್ಯದ ಸಣ್ಣ ಗೋಡೆಗಳಲ್ಲಿಯೂ ಸಹ ಅದೇ ರೀತಿಯ ಕಮಾನಿನ ಗೂಡುಗಳನ್ನು ನಿರ್ಮಿಸಲಾಗಿದೆ. ಸರಳವಾದ ಚಪ್ಪಟೆಯಾಕಾರದ ಗುಮ್ಮಟಗಳನ್ನು

ಅಷ್ಟಭುಜಾಕೃತಿಯ ಗುಮ್ಮಟದ ಬುಡದ ಮೇಲೆ ನಿರ್ಮಿಸಲಾಗಿದೆ. ದಕ್ಷಿಣ ವಿಭಾಗದ ಮೇಲಿನ ಗುಮ್ಮಟದಲ್ಲಿ ಹದಿನಾರು ತ್ರಿವಿಧ ಪಟ್ಟಿಯ ಅಲಂಕಾರ ಉಳಿದುಕೊಂಡಿದೆ.[8]

೩೦. ಕಮಲಮಹಲ್ :

ಹಂಪಿಯ ಸ್ಮಾರಕಗಳಲ್ಲಿಯೇ ಅತ್ಯಂತ ಗಮನ ಸೆಳೆಯುವ ಅಪರೂಪದ ಕಟ್ಟಡಗಳಲ್ಲಿ ಕಮಲಮಹಲ್ ಒಂದು. ಎರಡು ಮಹಡಿಗಳ ಪೆವಿಲಿಯನ್ ಇದು ಚೌಕಾಕಾರದಲ್ಲಿದೆ. ಇದನ್ನು ಚಿತ್ರಾಂಗಿಣಿ ಮಹಲ್, ರಾಣಿಮಹಲ್, ಲೋಟಸ್‌ಮಹಲ್, ಪದ್ಮಮಹಲ್, ಪಂಚಮಹಲ್ ಎಂತಲೂ ಕರೆಯುತ್ತಾರೆ. ಈ ಸ್ಮಾರಕವೂ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪದಲ್ಲಿ ನಿರ್ಮಿಸಲಾಗಿದೆ. ಕಮಲ ಮಹಲ್ ಎಂದು ಹೆಸರು ಬರಲು ಕಾರಣವೆಂದರೆ ಮೇಲಿನಿಂದ ನೋಡಿದಾಗ ಇದು ಕಮಲ ಅರಳಿದ ಹೂವಿನ ಹಾಗೆ ಕಾಣಿಸುವುದರಿಂದಾಗಿ ಹೀಗೆ ಕರೆಯುತ್ತಾರೆ. ಪರ್ಶಿಯನ್ ಭಾಷೆಯಲ್ಲಿ ಜನಾನಾ 'ಎನ್‌ಕ್ಲೋಸರ್' ಎಂದು ಕರೆಯುತ್ತಾರೆ. ಇದನ್ನು ಕೇಂದ್ರದಲ್ಲಿ ಹದಿನಾರು ಕಂಬಗಳುಳ್ಳ ಮತ್ತು ಉಳಿದ ನಾಲ್ಕು ದಿಕ್ಕುಗಳಲ್ಲಿ ಎರಡೆರಡು ಕಂಬಗಳಂತೆ ಚೌಕಕಾರದ ಹಜಾರವನ್ನು ನಿರ್ಮಿಸಲಾಗಿದೆ. ಇನ್ನು ಸರಳವಾಗಿ ಹೇಳಬೇಕೆಂದರೆ ನಾಲ್ಕು ದಿಕ್ಕಿನಲ್ಲಿ ನವರಂಗವನ್ನು ಮತ್ತು ಕೇಂದ್ರದಲ್ಲಿ ಮತ್ತೊಂದು ರಂಗವನ್ನು ನಿರ್ಮಿಸಲಾಗಿದೆ. ಅದೊಂದು ಚಾಚೌಕಕಾರದ ರಚನೆ. ಪಾರ್ಶ್ವದಲ್ಲಿ ಮುಂಚಾಚುಗಳು ಅದನ್ನು ಹದಿಮೂರು ಅಂಕಣಗಳನ್ನಾಗಿ ಮಾಡಿದೆ. ತಳಹದಿಯು ನಯವಾಗಿ ಕೆತ್ತಿದ ಕಲ್ಲಿನ ಅಚ್ಚುಗಳಿಂದ ಕೂಡಿದೆ. ಕೆಳಗಿನ ಮಹಡಿಯಲ್ಲಿ ೨೪ ಆಸರೆಗಳಿವೆ. ಎಲ್ಲಾ ಕಡೆಗಳಿಂದಲೂ ತೆರೆದ ಕಮಾನುಗಳಿವೆ. ಕಮಾನುಗಳಿಗೆ ಬಳ್ಳಿಗಳು, ಹೂವುಗಳು, ಹಂಸಗಳು, ರೇಖಾಗಣಿತ ವಿನ್ಯಾಸಗಳು ಮೊದಲಾದ ಗಾರೆ ಕೆಲಸದ ಅಲಂಕಾರವಿದೆ. ಮೇಲೆ ಕೋನಾಕೃತಿಯ ಸೂರು ಇದೆ. ಈಶಾನ್ಯ ಮೂಲೆಯಲ್ಲಿ ಮಹಡಿ ಮೆಟ್ಟಿಲುಗಳಿವೆ. ಮೇಲು ಮಾಳಿಗೆಗೆ ನಾಲ್ಕು ಮತ್ತು ಎಂಟು ಆಸರೆಗಳಿವೆ. ಮೇಲಿನ ಈ ಮಾಳಿಗೆಯು ಎಲ್ಲಾ ಕಡೆಯು ಮುಚ್ಚಿದ್ದು, ಕಮಾನುಗಳಿರುವ ಕಿಟಕಿಗಳಿವೆ. ಮೇಲು ರಚನೆಯನ್ನೇ ಹೋಲುವ ಕೋನಾಕೃತಿಯ ಸೂರುಗಳು ಮತ್ತು ಚಾವಣಿಗಳಿವೆ. ಬೇಸಿಗೆಯ ಕಾಲವನ್ನು ರಾಣಿಯರು ಇಲ್ಲಿ ಕಳೆಯುತ್ತಿದ್ದರು. ಹಿಂದೂ-ಮುಸ್ಲಿಂ ಜೈನ ಮಿಶ್ರಿತ ಶೈಲಿಯಿಂದ ಕಟ್ಟಿಸಿದ್ದ ಈ ಮಹಲ್‌ನ ಮೊದಲನೆಯ ತಲೆಭಾಗವು ಮುಸ್ಲಿಂ ಶೈಲಿಯ ಮಸೀದಿ ಆಕಾರದಿಂದ ಕೂಡಿದ್ದು, ಇದರ ಪ್ರತಿ ಮೂಲೆಯಲ್ಲಿಯು ಮುಸ್ಲಿಂ ಆಕಾರದ ಕಮಾನುಗಳಂತೆ ನಿರ್ಮಿಸಲ್ಪಟ್ಟಿದೆ. ಈ ಮಹಲಿನ ಮಧ್ಯಭಾಗವು ಈ ಜೈನ ಆಕಾರದ ಗೋಪುರಗಳಂತೆ ರಚಿಸಲ್ಪಟ್ಟಿರುತ್ತದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಈ ಸಮಯದಲ್ಲಿ ವಿಜಯನಗರದಲ್ಲಿ ಇಸ್ಲಾಂ ವಾಸ್ತುಶಿಲ್ಪ ಸ್ವತಂತ್ರ್ಯವಾಗಿ ಉಪಯೋಗಿಸಲ್ಪಟ್ಟಿತು ಎಂಬುದು ಸ್ಪಷ್ಟ.

೩೧. ರಾಣಿಯರ ಸ್ನಾನಗೃಹ :

ರಾಣಿಯರ ಸ್ನಾನಗೃಹ ಎನ್ನುವುದು ರಾಜರ ಆವರಣ ಬಳಿ ಇರುವ ಚೌಕಕಾರದ ನೀರಿನ ಅಂಗಳ ಇದಕ್ಕೆ ನಾಲ್ಕು ಕಡೆ ಕಾಲುವೆ ನೀರು ಹರಿದಿದೆ. ಪೂರ್ವದಲ್ಲಿರುವ ಕಿಂಡಿಯ ಮೂಲಕ ಒಂದು ನಳಿಕೆಯು

ಕಾಲುವೆಯಿಂದ ನೀರನ್ನು ಒಳಕ್ಕೆ ವಿಶಾಲವಾದ ಚೌಕಾಕಾರದ ಬೋಗುಣಿಯಂತಹ ಮಧ್ಯಭಾಗಕ್ಕೆ ಹರಿಸುತ್ತಿತ್ತು. ಈ ಬೋಗುಣಿಯ ಸುತ್ತಲೂ ಆಸರೆಗಳ ಮೇಲೆ ಕಟ್ಟಿದ ಕಮಾನು ಅಂಕಣಗಳಿವೆ. ಮೂರು ಪಕ್ಕಗಳ ಮಧ್ಯದ ಅಂಕಣಗಳು ತೆರೆದವು. ಆದರೆ ದಕ್ಷಿಣದಲ್ಲಿನಾಲೀಯ ಮೇಲೆ ಚಾಚಿಕೊಂಡ ಒಂದು ಉಪ್ಪರಿಗೆಯ ಮೊಗಸಾಲೆಯಿಂದ ಈ ಮೊಗಸಾಲೆಯ ಪಕ್ಕದಲ್ಲಿ ಒಳಕ್ಕೆ ಬರುವ ಬಾಗಿಲು ಇಡೀ ಕಟ್ಟಡದ ಹೊರಭಾಗವು ಸಾದಾ ಆಗಿದೆ. ನಡುವೆಯ ಒಳಭಾಗವು ಬೋಗುನಿಗೆ ತೆರೆದಿದ್ದು ಕಮಾನುಗಳಿಂದ ಕೂಡಿದೆ. ಈ ಮೊಗಸಾಲೆಗಳಲ್ಲಿ ಸಣ್ಣ ಕಮಾನುಗಳು ಕಿಟಕಿಗಳು ಮತ್ತು ಕೋನಾಕೃತಿಯ ಸೂರು ಇವೆ. ಬಾಲ್ಕನಿಗಳ ಹೊರಭಾಗ ತೆರೆದ ಮುಂಭಾಗಕ್ಕೆ ರೇಖಾಗಣಿತೀಯ ಚಿತ್ರಗಳು ಮತ್ತು ಹೂ-ಎಲೆಗಳ ಅಲಂಕಾರ ಮಾಡಿದೆ. ನಡುವೆಯ ಮೇಲು ಚಾವಣಿಯಲ್ಲಿ ಬೇರೆ ಬೇರೆ ವಾಸ್ತುಶಿಲ್ಪ ಮತ್ತು ಕಲಾಶೈಲಿಗಳ ಮಿಶ್ರಣ ಕಂಡುಬರುತ್ತದೆ. ವಾಸ್ತು ಯೋಜನೆಯಲ್ಲಿ ಅಲಂಕರ ವಿವರಗಳಲ್ಲಿ ಒಂದು ಛಾವಣಿ ಇನ್ನೊಂದಕ್ಕಿಂತ ಬೇರೆಯಾಗಿರುತ್ತದೆ. ಗಾರೆಯ ತಾವರೆ ಮೊಗ್ಗುಗಳು, ಹಂಸಗಳು, ಯಾಳಿಗಳು, ಗಿಣಿಗಳು, ಹೂವಿನ ದಳಗಳು, ವಿಲಕ್ಷಣವಾದ ಹೂಬಳ್ಳಿಗಳು ಇವುಗಳ ಅಲಂಕಾರವಿದೆ. ಆಗ್ನೇಯ ಮೂಲೆಯಲ್ಲಿ ಕಟ್ಟಡದ ಮೇಲಕ್ಕೆ ಹತ್ತಿ ಹೋಗಲು ಮೆಟ್ಟಿಲುಗಳವೆ.

**೩.೨. ಆನೆಯ ಲಾಯ**

ಅರಸರ ರಾಜಧಾನಿಯ ಪರಧಿಯಲ್ಲಿ ಬರುವ ಅತ್ಯಂತ ದೊಡ್ಡ ಮತ್ತು ಅತ್ಯಂತ ವ್ಯವಸ್ಥಿತವಾಗಿ ನಿರ್ಮಿಸಲ್ಪಟ್ಟ ಸ್ಮಾರಕ ಎಂದರೆ ಆನೆಯ ಲಾಯ ಇದರ ಎದುರಿಗೆ ವಿಶಾಲವಾದ ಮೈದಾನವಿದೆ. ಈ ಕಟ್ಟಡದಲ್ಲಿ ವಿವಿಧ ಗುಮ್ಮಟವು ಮತ್ತು ಗೋಪುರಗಳನ್ನು ಹೊಂದಿದೆ. ೧೧ ಕೋಣೆಗಳಿವೆ. ಕೆಲವು ಕೋಣೆಗಳಿಗೆ ಬಾಗಿಲು ಚೌಕಟ್ಟನ್ನು ಕೂಡಿಸಲಾಗಿದೆ. ಈ ಸಂಪೂರ್ಣ ರಚನೆಯು ದಕ್ಷಿಣೋತ್ತರವಾಗಿದೆ. ಪಶ್ಚಿಮಾಭಿಮುಖವಾಗಿ ದೊಡ್ಡ ದೊಡ್ಡ ಬಾಗಿಲುಗಳಿವೆ. ಪೂರ್ವದಲ್ಲಿ ಸಣ್ಣ ಸಣ್ಣ ದ್ವಾರಗಳಿವೆ. ಈ ಕಟ್ಟಡದ ಮಧ್ಯದ ಎರಡು ಬದಿಗಳಲ್ಲಿ ಕಟ್ಟಡದ ಮೇಲೆ ಮಾಳಿಗಿಗೆ ಹೋಗಲು ಮೆಟ್ಟಿಲುಗಳಿವೆ. ಕಟ್ಟಡದ ಮೇಲ್ಭಾಗದ ಮಧ್ಯ ಭಾಗದಲ್ಲಿ ಮತ್ತೊಂದು ಕೋಣೆಯಿದೆ. ಈ ಆನೆಯ ಲಾಳದ ಹೊರಭಾಗವನ್ನು ಅವಲೋಕಿಸಿದಾಗ ಪ್ರತಿಯೊಂದು ಕೋಣೆಯು ದ್ವಾರವು ಕಮಾನಿನ ಆಕಾರದ ದ್ವಾರವನ್ನು ಹೊಂದಿದೆ. ಪ್ರತಿ ಕಮಾನಿನ ದ್ವಾರದ ಪಕ್ಕದಲ್ಲಿ ಮೂರು ಸಣ್ಣ ಕಮಾನುಗಳನ್ನು ಬಿಡಲಾಗಿದೆ. ಇಳಿಜಾರಿನ ಮಾಳಿಗೆಯ ಕುಸಿದಿದೆ. ಆದರೆ ಅದಕ್ಕೆ ಆಸರೆಯಾದ ಕಲ್ಲಿನ ಬೇರುಗಳು ಇನ್ನೂ ಇವೆ. ಮಧ್ಯದ ಕೋಣೆಯನ್ನು ಹೊರತು ಪಡಿಸಿ ಉಳಿದ ಎಲ್ಲಾ ಕೋಣೆಗಳ ಮೇಲೆ ವಿವಿಧ ವಿನ್ಯಾಸಗಳನ್ನು ಒಳಗೊಂಡ ಗುಮ್ಮಟಗಳನ್ನು ನಿರ್ಮಿಸಲಾಗಿದೆ. ಕೇಂದ್ರದ ಗೋಪುರದ ಎರಡು ಬದಿಗಳಲ್ಲಿ ಸಮಮಿತಿ ಆಕೃತಿಯಲ್ಲಿ ಗುಮ್ಮಟಗಳನ್ನು ನಿರ್ಮಿಸಲಾದ ಗುಮ್ಮಟದ ಹೊರಭಾಗದಲ್ಲಿ ಹಲವಾರು ಸುರಳಿ ಆಕೃತಿಯ ಚಿತ್ರ ವಿನ್ಯಾಸಗಳನ್ನು ಮಾಡಲಾಗಿದೆ. ಈ ಕೋಣೆಗಳು ವಿಶಿಷ್ಟ ರೀತಿಯ ದ್ವಾದಶಾಕೃತಿಯಲ್ಲಿ ನಿರ್ಮಾಣಗೊಂಡಿದೆ. ಕೆಲವು ಗುಮ್ಮಟಗಳು ಮತ್ತು ಗೂಡುಗಳು ದೇವಾಲಯದ ರೀತಿಯ ಎತ್ತರ ಗೋಡೆಗಳನ್ನು ಇಟ್ಟಿಗಿಯ

ರಚನೆಯನ್ನು ಹೊಂದಿವೆ. ಇನ್ನು ಕೆಲವು ಗುಮ್ಮಟಗಳ ಮೇಲೆ ಅನೇಕ ಅಲಂಕಾರ ಪಟ್ಟಿಯನ್ನು ನಿರ್ಮಿಸಲಾಗಿದೆ. ಈ ಆನೆಯ ಲಾಳ ೧೧ ಕೊಠಡಿಗಳಲ್ಲಿ ಒಟ್ಟು ೧೦ ಪಟ್ಟದ ಆನೆಗಳನ್ನು ಕಟ್ಟುತ್ತಿದ್ದರು. ಈ ಹನ್ನೊಂದು ಕೊಠಡಿಯ ಮೇಲ್ಭಾಗದ ಗೋಪುರಗಳು ಗೋಲಾಕಾರದ 'ಡೂಮ್' ಶೈಲಿಯಲ್ಲಿರುತ್ತವೆ. ಎಡ ಮತ್ತು ಬಲಭಾಗದ ೧,೩,೫,ನೆಯ ಡೂಮ್‌ಗಳು ಈಗಿನ ಬಿಜಾಪುರದ ಗೋಲಗುಮ್ಮಟದ ಡೂಮ್‌ನ ಶೈಲಿಯಂತೆ ಇವೆ. ಉಳಿದ ೨,೪ ಡೂಮ್‌ಗಳು ಜೈನಧರ್ಮದ ಶೈಲಿಯಂತೆ ಹೋಲುತ್ತವೆ. ಉಳಿದ ಮಧ್ಯದ ಡೂಮ್ ಹಿಂದು ಧರ್ಮದ ಶೈಲಿಯಂತಿರುತ್ತದೆ.[೬]

## ೩೩. ದಣ್ಣಾಯಕ ಪ್ರಕಾರ (ದಂಡನಾಯಕ) :

ಈ ಪ್ರಕಾರವು ಭೂಮ್ಯಂತರ್ಗತ ದೇವಾಲಯದಿಂದ ಪೂರ್ವಕ್ಕೆ ಇದೆ. ಸುತ್ತಲೂ ಪ್ರಕಾರದ ಗೋಡೆಗಳಿಂದಾವೃತ್ತವಾದ ಈ ಕೋಟೆಯೊಳಗೆ ಹಲವಾರು ಸಣ್ಣ ಕಟ್ಟಡಗಳಿದ್ದು, ಈಗ ಕೆಲವು ಗೋಡೆ ಭಾಗಗಳು ಮಾತ್ರ ಅವಶೇಷವಾಗಿ ಉಳಿದಿವೆ. ಈಶಾನ್ಯದ ಮೂಲೆಯಲ್ಲಿ ಮೂರು ಸ್ತರಗಳು ಅಲಂಕೃತವಾದ ಅಧಿಷ್ಠಾನವನ್ನು ಕಾಣಬಹುದು. ಆಗ್ನೇಯ ಮೂಲೆಯಲ್ಲಿ ಮೂರು ಕಡೆಗಳಲ್ಲಿ ಮುಚ್ಚಿದ ಉತ್ತರದ ಕಂಬಗಳನ್ನುಳ್ಳ ಅಂಗಳವೊಂದಿದೆ. ಚೌಕಾಕಾರದ ಕಂಬಗಳಿಂದ ಕಮಾನುಗಳು ಹೊರಹೊಮ್ಮಿವೆ. ಛಾವಣಿಯಲ್ಲಿ ತಲೆಕೆಳಗಾದ ಕಮಲದ ಒಂಭತ್ತು ಗುಮ್ಮಟಗಳಿವೆ. ಇಮ್ಮಡಿ ದೇವರಾಯನು ಸಮರ್ಥ ಅಶ್ವರೋಹಿಗಳಾದ ಮಹಮ್ಮದಿಯರನ್ನು ಸೈನ್ಯದಲ್ಲಿ ಸೇರಿಸಿಕೊಂಡು ಅವರಿಗಾಗಿ ಮಸೀದಿಯನ್ನು ಕಟ್ಟಿಸಿದನೆಂಬುದು ಫೆರಿಸ್ತಾನ ಹೇಳಿಕೆ. ಈ ಅಂಗಳದಂತಹ ಕಟ್ಟಡವೇ ಆ ಮಸೀದಿಯೊಂದು ಹಲವರ ಅಭಿಪ್ರಾಯ ವಾಸ್ತವವಾಗಿ ಕಮಾನಿನ ಶೈಲಿಯನ್ನು ಹೊರತು ಪಡಿಸಿದರೆ ಮಸೀದಿಗಳಿಗಿರಬೇಕಾದ ಯಾವ ಲಕ್ಷಣವೂ ಇಲ್ಲ.

## ೩೪. ಜನಾನ ಪ್ರಕಾರ :

ಹಜಾರ ರಾಮಸ್ವಾಮಿ ದೇವಾಲಯದ ಈಶಾನ್ಯಕ್ಕೆ ರಾಣಿವಾಸ ಅಥವಾ ಜನಾನ ಪ್ರಕಾರ ಎಂದು ಕರೆಯಲಾಗುವ ಎತ್ತರದ ಗೋಡೆಗಳ ಆವರಣದಲ್ಲಿ ಕೆಲವು ಪ್ರಮುಖ ಕಟ್ಟಡಗಳಿವೆ. ಇದಕ್ಕೆ ಪಶ್ಚಿಮ ದ್ವಾರದಿಂದ ಗೋಡೆಯ ಕೆಳಭಾಗ ಅಗಲವಾಗಿದ್ದು, ಮೇಲೇರಿದಂತೆ ಕಿರಿದಾಗಿದೆ. ಈ ಗೋಡೆಯ ಮೂರು ಮೂಲೆಗಳಲ್ಲಿ ಕಾವಲು ಗೋಪುರಗಳಿವೆ. ವಾಸ್ತವವಾಗಿ ಇದನ್ನು ರಾಣಿವಾಸವೆನ್ನಲು ಹೆಚ್ಚಿನ ಆಧಾರಗಳಿಲ್ಲ. ಅರಮನೆ ಎನ್ನಬಹುದಾದ ಎರಡು ಕಟ್ಟಡಗಳ ತಳಪಾಯ ಮಾತ್ರ ಉಳಿದಿದೆ. ಜೊತೆಗೆ ಒಂದು ಕೊಳವೂ ಇದೆ. ಒಂದು ಕಟ್ಟಡದ ಸಾಲುಗಳು ಬಹಳ ಹಿಂಜರಿದಂತೆ ಮತ್ತು ಉಬ್ಬಿದಂತೆ ತೋರುವ ತಳಹದಿ ಮಾತ್ರ ಲಭ್ಯವಾಗಿದ್ದು, ಇದು ಒಬ್ಬ ರಾಣಿಯ ನಿವಾಸವೆಂದು ಹೇಳಲಾಗಿದೆ. ವಿಜಯನಗರದಲ್ಲಿ ಕಾಣಿಸಿಕೊಂಡಿರುವ ಇಂತಹ ನಿವಾಸಗಳ ಅವಶೇಷಗಳಲ್ಲಿ ೧೫.೭ ಮೀ ೨೬.೬ ಮೀ ವಿಸ್ತಾರದ ಈ ತಳಪಾಯವೇ ಅತಿ ವಿಶಾಲವಾದುದು. ಸಮೀಪದಲ್ಲಿಯೇ ಸ್ತ್ರೀ ಕಾವಲುಗಾರರ ಮನೆಯೆಂದು ಹೇಳಲಾದ

ಕಟ್ಟಡವಿದ್ದು ಪೂರ್ವಾಭಿಮುಖವಾಗಿರುವ ಈ ಕಟ್ಟಡ ದ್ವಾರ ಹೊರತುಪಡಿಸಿದರೆ ಇತರ ಯಾವ ವಿಧವಾದ ಬಾಗಿಲುಗಳಾಗಲಿ, ಕಿಟಕಿಗಳಾಗಲಿ ಇದಕ್ಕಿಲ್ಲ. ಅಷ್ಟೇನೂ ಎತ್ತರವಲ್ಲದ ಈ ಕಟ್ಟಡದ ಛಾವಣಿ ಸಮತಟ್ಟಾಗಿದೆ. ಈ ಕಟ್ಟಡದ ಉಪಯೋಗ ಎಂತಹದಾಗಿತ್ತು ಎಂದು ಸ್ಪಷ್ಟವಿಲ್ಲ. ಮಹಿಳಾ ಕಾವಲುಗಾರರ ವಾಸಸ್ಥಾನವೆಂದು ಪ್ರತೀತಿ ಇದ್ದರೂ, ಗಾಳಿ ಬೆಳಕುಗಳಿಲ್ಲದ ಇದು ವಾಸಯೋಗ್ಯವಲ್ಲ. ಬಹುಶಃ ಇದೊಂದು ಉಗ್ರಾಣ ಅಥವಾ ಮದ್ದು ಗುಂಡುಗಳನ್ನು ಶೇಖರಿಸುವ ಸ್ಥಳವಾಗಿದ್ದಿರಬಹುದು.[೧೦]

ಆಸ್ಥಾನಕ್ಕೆ ಸಂಬಂಧಿಸಿದ ಸ್ಮಾರಕಗಳು ಮತ್ತು ಇತರ ರಚನೆಗಳು ನಗರದ ಮಧ್ಯಭಾಗದಲ್ಲಿ ವಿಜಯನಗರದ ಧಾರ್ಮಿಕ ಕ್ಷೇತ್ರಗಳಲ್ಲಿ ಮತ್ತು ನಗರವನ್ನು ದಾಟಿ ಸಮೀಪದ ಹಳ್ಳಿಗಳಲ್ಲಿ ಕೂಡ ಅವುಗಳನ್ನು ಗುರುತಿಸಬಹುದಾಗಿದೆ. ಅವುಗಳಲ್ಲಿ ಮುಖ್ಯವಾದವು ಈ ಕೆಳಗಿನಂತಿವೆ.

### ೩.೫. ನೀರಾವರಿ ಪ್ರದೇಶದಲ್ಲಿರುವ ಮಂಟಪ

ಈಗ ಈ ಕಟ್ಟಡವು ಸಂಪೂರ್ಣವಾಗಿ ಕಬ್ಬಿನ ಗದ್ದೆಯಲ್ಲಿ ಮುಚ್ಚಿ ಹೋಗಿದೆ. ಇದು ರಾಜರ ಕೇಂದ್ರಸ್ಥಾನದಿಂದ ಹತ್ತಿರದಲ್ಲೇ ಉತ್ತರಕ್ಕೆ ಇದೆ.

ಇದು U ಆಕಾರದಲ್ಲಿದ್ದು ಐದು ಆಯತಾಕಾರದ ಭಾಗಗಳನ್ನು ಉತ್ತರ ದಕ್ಷಿಣವಾಗಿ ನಿರ್ಮಿಸಲಾಗಿದೆ. ಎರಡು ಕಡೆ ಕೊನೆಯಲ್ಲಿ ಚೌಕಕಾರದ ಭಾಗಗಳಿವೆ. ಪಶ್ಚಿಮದ ಗೋಡೆಯಲ್ಲಿ ಒಂದನ್ನು ಬಿಟ್ಟು ಇನ್ನೊಂದರಂತೆ ಕಮಾನಿನ ತೆರವುಗಳಿವೆ. ಉತ್ತರ ಮತ್ತು ದಕ್ಷಿಣದ ಗೋಡೆಗಳಲ್ಲಿ ಒಂದೇ ತೆರನಾದ ಕಮಾನಿನ ಕಿಟಕಿಗಳಿವೆ. ಈ ಕಟ್ಟಡದ ಎಲ್ಲಾ ದಿಕ್ಕುಗಳು ಮಧ್ಯಭಾಗಕ್ಕೆ ಮುಖ ಮಾಡಿದಂತೆ ಕಮಾನಿನ ತೆರವು (Arched Openigs)ಗಳಿವೆ. ಕಮಾನಿನ ದ್ವಾರ ಹೊಂದಿದ ಎರಡು ಗೋಡೆಗಳು ಎರಡೆರಡು ಆವರಣಗಳನ್ನು ಪ್ರತ್ಯೇಕಿಸುತ್ತವೆ. ಪಶ್ಚಿಮಕ್ಕೆ ಇರುವ ಮಧ್ಯದ ಕಮಾನಿನ ಮೇಲೆ ಕಲ್ಲಿನ ಬಂಡೆಗಳು ಮುಂದೆ ಚಾಚಿದ್ದು ಅದರ ಮೇಲೆ ಎತ್ತರದ ಗೋಡೆ ಇದೆ.

**ಹೊರಭಾಗ :**

ಇಂದಿಗೂ ಕೂಡ ಮೂಲ ಪ್ಲಾಸ್ಟರ್ ಅಲ್ಲಲ್ಲಿ ಉಳಿದುಕೊಂಡಿದೆ. ಉತ್ತರಕ್ಕೆ, ಪಶ್ಚಿಮಕ್ಕೆ ಮತ್ತು ದಕ್ಷಿಣದಲ್ಲಿ ವಿಶಾಲವಾದ ಕಮಾನಿನ ತೆರವುಗಳಿವೆ ಮತ್ತು ಸಣ್ಣ ಕಮಾನಿನ ಕಿಟಕಿಗಳನ್ನು ಆಯತಾಕಾರದ ಸಮತಲಗಳಲ್ಲಿ ಜೋಡಿಸಲಾಗಿದೆ. ಕೇಂದ್ರದ ದ್ವಾರವು ಎರಡು ಸಮತಲದಲ್ಲಿ ಕಮಾನನ್ನು ಹೊಂದಿದ್ದು ಅದರ ಸುತ್ತಲೂ ಇಟ್ಟಿಗಿಯ ಕುರುಹುಗಳಿವೆ. ಇಲ್ಲಿ ಗೋಡೆಗಳಿಗೆ ಒಂದು ತೆರನಾದ ರಚನೆಗಳ ಒತ್ತುವರಿಯಾಗಿದೆ. ಬಹುಶಃ ಕಮಾನಿ ತೆರೆನಾದದ್ದು ಇವು ಕಲ್ಲಿನ ಹಾಸು ಬಂಡೆಯ ಗೋಡೆಯನ್ನು ಹೊಂದಿದೆ. ಎತ್ತರದಲ್ಲಿ ಈ ಕಟ್ಟಡದ ಮೇಲ್ಭಾಗಕ್ಕೆ ಹೋಗಲು ಮೆಟ್ಟಿಲುಗಳಿವೆ. ಪೂರ್ವದಲ್ಲಿ ಮಧ್ಯದ ಮೂರು ಕಮಾನುಗಳು ಎತ್ತರವಾದ ಗೋಡೆಯಿಂದ ಎದ್ದು ನಿಂತಂತೆ ಕಾಣುತ್ತವೆ. ಮೇಲ್ಭಾಗದಲ್ಲಿ ಶಿಥಿಲಗೊಂಡಿದ್ದು ಸಣ್ಣ ಕಲ್ಲುಗಳು ಗೋಚರಿಸುತ್ತವೆ. ಗೋಡೆಯ ಮೇಲ್ಭಾಗದಲ್ಲಿ ಬಹುಚಕ್ರವಾದ

ರಚನೆಗಳಿವೆ. ಬೀಮು (Beam) ಮತ್ತು ತೊಲೆಗಳ ಆಸರೆಗಾಗಿ ನಿರ್ಮಿಸಿದ ಮುಂಚಾಚಿದ ಭಾಗಗಳು ಈಗ ಉಳಿದಿಲ್ಲ. ಹೊರಭಾಗದಲ್ಲಿ ಒಂದೇ ಸಮತಲದಲ್ಲಿ ತೆರವುಗಳಿವೆ.

**ಒಳಭಾಗ :**

ಈಗ ಬಹಳಷ್ಟು ಶಿಥಿಲಗೊಂಡಿದ್ದರೂ, ಕೆಲವು ಕಡೆ ಹಳೆ ಪ್ಲಾಸ್ಟರ್ ಇನ್ನೂ ಉಳಿದುಕೊಂಡಿದೆ. ಇದಕ್ಕೆ ಆಧುನಿಕತೆಯ ಲೋಪ ಉಂಟಾಗಿಲ್ಲ. ಗೋಡೆಗಳು ಹೊರಭಾಗದಲ್ಲಿ ಚಾಚಿಕೊಂಡಿದ್ದು, ವಕ್ರವಾದ ರಚನೆಗಳನ್ನು ಹೊಂದಿವೆ. ಮಧ್ಯದ ಮೂರು ಕಮಾನುಗಳನ್ನು ಪ್ರತ್ಯೇಕಿಸುವ ಗೋಡೆಗಳು ಮಾತ್ರ ಮೂರು ಸಮತಲಗಳನ್ನು ಹೊಂದಿದ್ದು ಉಳಿದ ಕಡೆ ಒಂದು ಸಮತಲ (one plane) ಕೋನಾಕೃತಿಯ ಮೇಲ್ಭಾಗದಲ್ಲಿ ಅಷ್ಟಾಕೃತಿಯ ಗುಮ್ಮಟಗಳಿವೆ. ಕಿಟಕಿಗಳನ್ನು ಆಯತಾಕಾರದ ಚೌಕಟ್ಟಿನಲ್ಲಿ (frames) ಇಡಲಾಗಿದೆ. ದ್ವಾರಗಳು ಬಹುತೇಕ ಬಿದ್ದು ಹೋಗಿವೆ. ಆದರೆ ಕಲ್ಲಿನ ಕೀಲು(linges)ಗಳು ಇಂದೂ ಸಹ ಕಂಡುಬರುತ್ತವೆ. ನೆಲದ ಭಾಗ ಬಹುತೇಕ ಹಾಳಾಗಿ ಮೂಲ ಸ್ವರೂಪವನ್ನು ಕಳೆದುಕೊಂಡಿದೆ. ಈ ಕಟ್ಟಡದ ಉಳಿದ ಎಲ್ಲಾ ಅಲಂಕಾರಗಳು ಇರುವುದು ಅಷ್ಟಾಕೃತಿಯ ಗುಮ್ಮಟಗಳಲ್ಲಿ ಅದರ ಮೇಲೆ ಕಲ್ಲಿನಲ್ಲಿ ಕೆತ್ತಲಾದ ಮತ್ತು ಕೆಳಮುಖವಾಗಿರುವ ಕಮಲದ ಚಿತ್ರಗಳು ಇವೆ. ಗುಮ್ಮಟದ ಕೆಳಭಾಗ (drum)ವನ್ನು ವಿವಿಧ ಅಲಂಕಾರ ಪಟ್ಟಿಯಿಂದ ಅಲಂಕರಿಸಲಾಗಿದೆ. ಕಮಲದ ಎಲೆಗಳು ಮತ್ತು ಹದಿನಾರು (v) ಆಕಾರದ ರಚನೆಗಳು ಪರಸ್ಪರ (ribs) ಛೇದಿಸುವಂತೆ ಮಧ್ಯದಲ್ಲಿ ಚಿತ್ರಿಸಲಾಗಿದೆ.

(b) ಗುಮ್ಮಟದಲ್ಲಿ ಎಂಟು ಸರಳವಾದ ಸುತ್ತುಗಳಿವೆ.

(c) ಗುಮ್ಮಟದ ಕೆಳಭಾಗದಲ್ಲಿ ಕಮಲದ ಹೂವಿನ ದಳಗಳ ಅಲಂಕಾರ ಪಟ್ಟಿಯಿದೆ. ಮಧ್ಯದಲ್ಲಿ ಹತ್ತು ಅಲಂಕಾರ ರಹಿತ ಸುತ್ತುಗಳಿವೆ.

(d) ಗುಮ್ಮಟದಲ್ಲಿ ಒಳರಚನೆ ಇದೆ.

(e) ಗುಮ್ಮಟದಲ್ಲಿ ಹದಿನಾರು ಸುತ್ತುಗಳಿವೆ. ಅದರ ಬುಡದಲ್ಲಿ (drum) ಕಮಲದ ದಳದ ಅಲಂಕಾರ ಪಟ್ಟಿ (prieze) ಇದೆ. ಮೇಲ್ಭಾಗದಲ್ಲಿ ಹದಿನಾರು ಛೇದವಾಗಿರುವ v ಆಕೃತಿಯ ರಚನೆ ಇದೆ.

ಕಟ್ಟಡ ವಾಯುವ್ಯದಲ್ಲಿ ಹಲವಾರು ಬಿದ್ದು ಹೋದ ಮತ್ತು ಕೀಳಲ್ಪಟ್ಟ ಕಲ್ಲುಗಳ ರಾಶಿ ಇದೆ. ಅದರ ಕೆಳಗೆ ನೀರಿನ ಸಂಪರ್ಕವಾಗಿರುವ ಕಾಲುವೆ ಇದೆ. ಅದು ದಕ್ಷಿಣದಿಂದ ಉತ್ತರಕ್ಕೆ ಹರಿಯುತ್ತದೆ.

## ೩.೬. ಕೃಷ್ಣದೇವಾಲಯದಲ್ಲಿನ ರಚನೆ

ರಾಜಧಾನಿಯಲ್ಲಿನ ಧಾರ್ಮಿಕ ಕೇಂದ್ರದಲ್ಲಿರುವ ಕೃಷ್ಣಮಂದಿರದ ದಕ್ಷಿಣದಲ್ಲಿರುವ ಈ ಸ್ಮಾರಕವು ಚೆನ್ನಾಗಿ ಸಂರಕ್ಷಿಸಲ್ಪಟ್ಟಿದೆ. ಈ ಸ್ಮಾರಕ ಮತ್ತು ಇದು ಇರುವ ದೇವಾಲಯದ ರಚನೆ, ಗೋಡೆಗಳು, ದ್ವಾರಗಳು, ಕಂಬಗಳುಳ್ಳ ಮಂಟಪ ಮೊದಲಾದವುಗಳನ್ನು ಗಮನಿಸಿದಾಗ ಅವೆರಡರ ಮಧ್ಯೆ ಸ್ಪಷ್ಟ ವೈರುಧ್ಯ (contrast) ಕಂಡುಬರುತ್ತದೆ.

ಈ ಆಯತಾಕಾರದ ರಚನೆಯನ್ನು ದಪ್ಪಕಲ್ಲು (rubble)ಗಳ ಜಗುಲಿ (plat form)ಯ ಮೇಲೆ ನಿರ್ಮಿಸಲಾಗಿದೆ. ಅಡಿಪಾಯದ ಮೇಲೆ ಕಾಂಕ್ರಿಟ್ ಮತ್ತು ಪ್ಲಾಸ್ಟರನ ಕುರುಹುಗಳನ್ನು ಪೂರ್ವ ಮತ್ತು ಉತ್ತರದಲ್ಲಿ ಮಾತ್ರ ಕಾಣಬಹುದು. ಇದರ ಪ್ರವೇಶಕ್ಕಾಗಿ ಪೂರ್ವದ ಮಧ್ಯದಲ್ಲಿ ಒಂದು ದ್ವಾರಬಾಗಿಲನ್ನು ಬಿಡಲಾಗಿದೆ. ಒಳಗೆ ಮೆಟ್ಟಿಲುಗಳು ನೆಲ ಮಾಳಿಗೆಗೆ ಇಳಿದು ಹೋಗುತ್ತವೆ. ಎರಡು ಚೌಕಕಾರದ ಎತ್ತರದ ಗೋಡೆಗಳು (piers) ಮತ್ತು ಇನ್ನು ನಾಲ್ಕು ಸಣ್ಣ ಗೋಡೆಗಳು ಒಳಭಾಗವನ್ನು ೩-೨ ವಿಭಾಗದಲ್ಲಿ ವಿಂಗಡಿಸಿದೆ. ಉತ್ತರ ಮತ್ತು ಪಶ್ಚಿಮದಲ್ಲಿ ಕಟ್ಟಡದ ಮೇಲೆ ಹೋಗಲು ಮೆಟ್ಟಿಲುಗಳಿವೆ.

**ಹೊರಭಾಗ :**

ಈ ಕಟ್ಟಡವು ಸಾದಾ ಇದ್ದು ದೊಡ್ಡದಾಗಿದೆ. ಮತ್ತು ಗಿಲಾವು ಪ್ಲಾಸ್ಟರ್‌ನಲ್ಲಿ ಯಾವುದೇ ರೀತಿಯ ರಚನೆಗಳಾಗಲಿ, ಅಲಂಕಾರವಾಗಲಿ ಕಂಡುಬರುವುದಿಲ್ಲ. ಮುಂಭಾಗದಲ್ಲಿ (ಪೂರ್ವದಲ್ಲಿ) ಸುಮಾರು ಮುಕ್ಕಾಲು ಎತ್ತರದಷ್ಟು (two thirds of the leight) ಒಂದು ಒಳ ರಚನೆಯನ್ನು ಸೇರಿಸಲಾಗಿದೆ.

ಅದನ್ನು ಗೋಡೆಯ ಮೇಲೆ ಮಾಳಿಗೆಯ ಉತ್ತರಕ್ಕೆ ನಿರ್ಮಿಸಲಾಗಿದೆ. ಪೂರ್ವದ ಪ್ರವೇಶದ್ವಾರವು ಕಮಾನನ್ನು ಹೊಂದಿದೆ. ಮತ್ತು ಬಹು ರೀತ್ಯ ಚೌಕಟ್ಟನ್ನು ಮಾಡಲಾಗಿದೆ. ಪ್ರವೇಶದ್ವಾರದ ಮೇಲ್ಭಾಗದಲ್ಲಿ ವೈಷ್ಣವ ಧರ್ಮದ ಸಂಕೇತಗಳನ್ನು ಗಿಲಾವು ಪ್ಲಾಸ್ಟರ್‌ನಲ್ಲಿ ಮಾಡಲಾಗಿದೆ. ಕಮಾನುಗಳುಳ್ಳ ಕಿಟಕಿಗಳು ಕೂಡ ಸರಳ (plain)ವಾಗಿವೆ. ಒಳಮೈಯನ್ನು ಇಟ್ಟಿಗೆಯಿಂದ ತುಂಬಿರುವ ತರುಹು ಕಂಡುಬರುತ್ತದೆ. ಕಟ್ಟಡದ ಮೇಲ್ಭಾಗದ (ಮಾಳಿಗೆ)ಲ್ಲಿ ಗುಮ್ಮಟ ಮಾದರಿಯ ಗೂಡುಗಳಿದ್ದು ಅವುಗಳಿಗೆ ಗಿಲಾವು ಪ್ಲಾಸ್ಟರ್ ಮಾಡಲಾಗಿದೆ. ಪಶ್ಚಿಮದ ಗೂಡುಗಳಲ್ಲಿ ವೃತ್ತಾಕಾರದ ತೂತುಗಳು (ಕಿಂಡಿಗಳು) ಮೂರು ಕಡೆ ಬರುತ್ತವೆ.

**ಒಳಭಾಗ :**

ಬೃಹದಾಕಾರದ ಮತ್ತು ಅಲಂಕಾರ ರಹಿತ ಒಳಭಾಗವು ಇನ್ನೂ ಹಳೆಯ ಗಿಲಾವು ಪ್ಲಾಸ್ಟರನ್ನು ಉಳಿಸಿಕೊಂಡಿದೆ. ಗೋಡೆ (piers)ಗಳಲ್ಲಿ ಸುರಳಿ ಆಕೃತಿಯಿದ್ದು ಅವುಗಳಿಂದ ಕಮಾನುಗಳು ಎದ್ದಿವೆ. ಗೂಡುಗಳು ಅಷ್ಟಕೃತಿಯಲ್ಲಿದ್ದು ಅವು ಕಮಾನುಗಳುಳ್ಳ ಕಿಟಕಿಗಳು ಮತ್ತು ಪಶ್ಚಿಮದ ಗೋಡೆಯಲ್ಲಿ ಒಂದು ಕಿಟಕಿಯನ್ನು (ಅದು ಈಗ ಮುಚ್ಚಿ ಹೋಗಿದೆ) ಇಡಲಾಗಿದೆ.

**೩೭. ರಾಜಧಾನಿ ಕೇಂದ್ರದಿಂದ ಆಗ್ನೇಯಕ್ಕಿರುವ ದ್ವಾರಬಾಗಿಲು**

ಈ ದ್ವಾರಬಾಗಿಲದ ಸಮುಚ್ಚಯ (complex)ವು ಬೃಹತ್ ಆಯತಾಕಾರದ ಆವರಣಗಳನ್ನು (ಅವು ದೊಡ್ಡ ಗೋಡೆಗಳಿಂದ ನಿರ್ಮಿತವಾಗಿವೆ) ಹೊಂದಿದೆ. ಒಂದು ಪ್ರವೇಶದ್ವಾರವು ಉತ್ತರಕ್ಕಿದೆ. ಆದರೆ ಅದು ಶಿಥಿಲಗೊಂಡಿದೆ. ಪೂರ್ವದಲ್ಲಿ ಇನ್ನೊಂದು ಪ್ರವೇಶದ್ವಾರವು ಇದೆ. ಅದಕ್ಕೆ ಗುಮ್ಮಟವಿದೆ.

ಈ ಗುಮ್ಮಟವು ಬೃಹತ್ ಗೋಡೆಯ ಮೇಲೆ ನಿಂತಿದೆ. ಗುಮ್ಮಟವನ್ನು ಈಗ ಮತ್ತೆ ಗಿಲಾವು ಪ್ಲಾಸ್ಟರ್‌ನಿಂದ ಸರಿಪಡಿಸಲಾಗಿದೆ. ಅದಕ್ಕೆ ಆಸರೆಯಾಗಿ ಗೋಡೆಯನ್ನು ಕಟ್ಟಲಾಗಿದೆ. (ಹೊಸದು) ಈ ನಿರ್ಮಾಣದಲ್ಲಿ ಸಣ್ಣ ಸಣ್ಣ ಕಲ್ಲುಗಳು ಗಾರೆ (monrter) ಮತ್ತು ಪ್ಲಾಸ್ಟರನ್ನು ಉಪಯೋಗಿಸಲಾಗಿದೆ. ಅದು ಆವರಣ ಗೋಡೆಯ ನಿರ್ಮಾಣದೊಂದಿಗೆ ಸಂಬಂಧ ಹೊಂದಿಲ್ಲ. (ಗೋಡೆಗಳನ್ನು ಕಲ್ಲುಗಳಿಂದ ನಿರ್ಮಿಸಿದ್ದು ಅಲ್ಲಿ ಗಾರೆ ಇರುವುದಿಲ್ಲ) ಗುಮ್ಮಟವು ನಾಲ್ಕು ದೊಡ್ಡ ಕಮಾನುಗಳ ಮೇಲೆ ನಿರ್ಮಿತಗೊಂಡಿದೆ. ಪೂರ್ವದ ಕೆಳಭಾಗದಲ್ಲಿ ಪ್ಲಾಸ್ಟರನಿಂದ ಮಾಡಿದ ಅಲಂಕಾರ ಸರಣಿ ಇದೆ. ಕಮಾನುಗಳಾಗಿ ನಿರ್ಮಿಸಿದ ಚೌಕಟ್ಟುಗಳು ಒತ್ತಾತ್ತಾಗಿ ಇದೆ. ಕಮಾನಿನ ಕೆಳಗೆ ಆಸರೆಯ ಗೂಡುಗಳನ್ನು ನಿರ್ಮಿಸಲಾಗಿದೆ. ಕಮಾನಿನ ಮೇಲೆ ಲಂಬವಾಗಿ ಉತ್ತರ ಮತ್ತು ದಕ್ಷಿಣದಲ್ಲಿ ಕಮಾನುಗಳುಳ್ಳ ಕಿಟಕಿಗಳನ್ನು ಇಡಲಾಗಿದೆ. ಮೂಲೆಗಳು ಸ್ವಲ್ಪ ಚೂಪಾಗಿವೆ ಅವುಗಳ ಮೇಲೆ ಗುಮ್ಮಟದ ಬುಡ (drum) ಇದ್ದು ಅದರ ಮೇಲೆ ಅಲಂಕಾರ ಪಟ್ಟಿ ಇದೆ. ಗುಮ್ಮಟದ ಒಳಗೆ ಚೂಪಾದ ಕಮಾನುಗಳಿವೆ.

## ೩.೮. ರಾಜಧಾನಿ ಕೇಂದ್ರದಿಂದ ಪೂರ್ವದ ದ್ವಾರ

ಪೂರ್ವಕ್ಕೆ ಮುಖ ಮಾಡಿರುವ ಈ ದ್ವಾರವು ಈಗ ಪೂರ್ತಿ ಕುಸಿದು ಹೋಗಿದೆ. ಗೋಡೆಯ ಮೇಲೆ ಉತ್ತರದಲ್ಲಿ ಪೂರ್ವ - ಪಶ್ಚಿಮವಾಗಿ ಕಾಲು ದಾರಿ ಇದೆ. ಅದು ಕಟ್ಟಡ ಮುಂಭಾಗ. ಈ ದ್ವಾರ ಬಾಗಿಲು ಕಮಾನು ಹೊಂದಿದ್ದು ಎರಡು ಸಮತಲದೊಂದಿಗೆ ತೊಲೆಗಳ ಮೇಲೆ ಕಮಾನಿನ ತೆರವುಗಳುಳ್ಳ ಒಂದು ಕೋಣೆಯಿದೆ. ಹಳೆಯ ಯಾವುದೇ ಅಲಂಕಾರ ಉಳಿದಿಲ್ಲ ಕೆಲವು ಮಾತ್ರ ಇವೆ.

## ೩.೯. ಈಶಾನ್ಯದಲ್ಲಿರುವ ದ್ವಾರಬಾಗಿಲು

ಈ ದ್ವಾರ ಬಾಗಿಲು ಎರಡು ಬೃಹತ್ ಕೋಟೆಯ ಬುರುಜುಗಳ (Bastion) ಮಧ್ಯದಲ್ಲಿದೆ. ಇದು ಉತ್ತರ ದಕ್ಷಿಣ ದಾರಿಯನ್ನು ಹೊಂದಿದ್ದು ಅದರ ಮೇಲೆ ಕೋಣೆ ಇದೆ. (ಅದು ತೊಲೆಗಳ ಮೇಲೆ ಇದೆ.) ಈ ಕೋಣೆಯ ಉತ್ತರದ ಮುಂಬಾಗವು ಸ್ವಲ್ಪ ಮಾತ್ರ ಉಳಿದಿದೆ. ಮತ್ತು ಎರಡು ಅಂತಸ್ತುಗಳನ್ನು ಹೊಂದಿದೆ.

ಕೆಳ ಅಂತಸ್ತಿನಲ್ಲಿ ಮೂರು ಕಮಾನುಗಳು ಆಯತಾಕಾರದ ಚೌಕಟ್ಟುಗಳಿವೆ. ಈ ಕಮಾನುಗಳು ಎರಡು ಸಮತಲದಲ್ಲಿವೆ. ಇವುಗಳ ಮೇಲೆ ತೆಳುವಾದ ಎಲೆಯ ಚಿತ್ರಗಳಿವೆ. ಅದೇ ತೆರನಾದ ಚಿತ್ರಗಳು ಮೇಲ್ಭಾಗದಲ್ಲಿ ಇವೆ. ಮಧ್ಯದ ಕಮಾನಿನ ಗೋಡೆಯು ವಿಶಾಲವಾದ ತೆರವು ನಿರ್ಮಿಸಲಾಗಿದೆ. ಮೇಲ್ಭಾಗದ ಅಂತಸ್ತು ಕಳ ಅಂತಸ್ತಿನ ಚಿತ್ರಣವನ್ನು ಹೊಂದಿದೆ. ಆದರೆ ಗಾತ್ರದಲ್ಲಿ ಸಣ್ಣದಿದೆ. ಇಲ್ಲಿ ಮಧ್ಯದ ಕಮಾನಿನ ಎರಡು ಬದಿಗಳಲ್ಲಿ ಸಣ್ಣ ಗೋಡೆಗಳಿವೆ ಬಲಭಾಗ ಹೊರತು ಪಡಿಸಿ ಕಿಟಕಿಗಳಿವೆ. ಪಕ್ಕದಲ್ಲಿರುವ ದೊಡ್ಡ ತೆರವುಗಳು ಬಹುತೇಕ ಕುಸಿದು ಹೋಗಿವೆ. ಗೋಡೆಯ ಪೂರ್ಣ ಮೇಲ್ಭಾಗದಲ್ಲಿ ಅಲಂಕಾರವಿದೆ. ಕೆಲವುಗಳು ಮಾತ್ರ ಗುರುತಿಸಲ್ಪಡುತ್ತವೆ.

## ೪೦. ಮಲಪನಗುಡಿಯ ನೈರುತ್ಯಕ್ಕಿರುವ ಬಾವಿ

ಹೊಸಪೇಟೆಯಿಂದ ಮಲಪನಗುಡಿಗೆ ಗ್ರಾಮಕ್ಕೆ ಪ್ರವೇಶ ಮಾಡುವ ಮೊದಲು ಎಡಭಾಗಕ್ಕೆ ಬಾವಿ ಕಂಡುಬರುತ್ತದೆ. ಇನ್ನೂ ಸಾಕಷ್ಟು ಸುಸ್ಥಿತಿಯಲ್ಲಿರುವ ಈ ಬಾವಿಯು ಹೊಸಪೇಟೆ ಕಮಲಾಪುರ ರಸ್ತೆ ಬದಿಯಲ್ಲಿ ಮಲಪನಗುಡಿಗೆ ಮೊದಲು ಕಂಡುಬರುತ್ತದೆ. ಹೊಸಪೇಟೆಯ ವಾಯವ್ಯಕ್ಕೆ ಈ ಬಾವಿ ಇದೆ. ಕ್ರಿ.ಶ. ೧೪೧೨ರಲ್ಲಿ ಕೆತ್ತಲಾದ ಮಲ್ಲಿಕಾರ್ಜುನ ದೇವಾಲಯದ ಮುಂದೆ ದೊರೆತ ಶಿಲಾಶಾಸನದಲ್ಲಿ ಈ ಬಾವಿಯನ್ನು ಕುರಿತು ಉಲ್ಲೇಖಿಸಲಾಗಿದೆ.

ವಾಯವ್ಯದಲ್ಲಿನ ಮೆಟ್ಟಿಲುಗಳು ಅಷ್ಟಭುಜಾಕೃತಿಯ ಬಾವಿಯ ಕೆಳಭಾಗದ ಎರಡು ಬದಿಯಲ್ಲಿ ಮೆಟ್ಟಿಲು ಸಾಲುಗಳು ಬಾವಿಯ ಸುತ್ತಲೂ ಇವೆ. ಕಮಾನಿನ ತೆರವುಗಳಿವೆ. ನೀರಿನ ಹತ್ತಿರ ಬಾವಿಯು ಚೌಕಾಕಾರದಲ್ಲಿದೆ. ಬಾವಿಯ ಮೇಲ್ಭಾಗದಲ್ಲಿ ಪರಸ್ಪರ ಹೊಂದಿಕೊಂಡಿರುವ ಎಂಟು ಕಮಾನುಗಳಿವೆ. ಮೆಟ್ಟಿಲುಗಳ ಎದುರು ಭಾಗದಲ್ಲಿ ಕನ್ನಡದಲ್ಲಿ ಲಿಪಿಯನ್ನು ಬರೆಯಲಾಗಿದೆ. ಇನ್ನೊಂದು ಬದಿಯಲ್ಲಿ ಹನುಮಾನನ ವಿಗ್ರಹ ಇರುವ ಬಂಡೆಯಿದ್ದು ವಾಯವ್ಯಕ್ಕೆ ತೆರೆದುಕೊಂಡಿದೆ. ಮತ್ತು ಅದು ಅರ್ಧಭಾಗ ನೀರಿನಲ್ಲಿ ಮುಳುಗಿ ಹೋಗಿದೆ ಇಲ್ಲಿ ಮೂರು ಗೋಡೆಗಳು ಸಾದಾ ಇವೆ. ಬಾವಿಯ ಸುತ್ತಲೂ ಇರುವ ಕಾಲುದಾರಿಯ ಮೇಲೆ ಛತ್ತು (roof) ಇದೆ. ಕೆಳಭಾಗದ ಯಾವುದೇ ಸಂರಚನೆ ಉಳಿದಿಲ್ಲ. ಕಾಂಕ್ರೀಟ್ ಪ್ಲಾಸ್ಟರ್ ಸುತ್ತಲೂ ಕಾಣುತ್ತದೆ. ಮೆಟ್ಟಿಲುಗಳು ಕಮಾನಿನ ಗೂಡನ್ನು ಹೊಂದಿದೆ. ಇದರಲ್ಲಿ (lintel) ರಾಮನ ಚಿತ್ರವನ್ನು ಮತ್ತು ಕನ್ನಡ ಲಿಪಿಯನ್ನು ಕೆತ್ತಲಾಗಿದೆ.

## ೪೧. ಕಮಲಾಪುರದ ಪೂರ್ವಕ್ಕೆ ಇರುವ ಕೆರೆ

ಕಮಲಾಪುರದಿಂದ ಸರಿಸುಮಾರು ನಾಲ್ಕು ಕಿ.ಮೀ. ಅಂತರದಲ್ಲಿ ಪೂರ್ವಕ್ಕೆ ಈ ಚೌಕಾಕಾರದ ಕೆರೆ ಇದೆ. ಕರೆಯ ಸುತ್ತಲೂ ಕಚ್ಚಾ ಕಲ್ಲುಗಳ ಅಂಚು ಇದ್ದು, ಅದು ಪುನರ್ ನಿರ್ಮಾಣಗೊಂಡಿದೆ. ಪಶ್ಚಿಮದಲ್ಲಿ ಒಂದು ಕಟ್ಟಡವಿದೆ. ಈ ಕಟ್ಟಡವು ಇಂದು ಸಂಪೂರ್ಣ ಶಿಥಿಲಗೊಂಡಿದೆ. ಆದರೆ ಎರಡು ಗೂಡುಗಳುಳ್ಳ ಭಾಗಗಳು ಈಗಲೂ ನಿಂತಿವೆ. ಉತ್ತರದ ಗೋಡೆಗಳು ಮತ್ತು ತೆರೆದ ಕಮಾನು ಪೂರ್ವ ಮತ್ತು ದಕ್ಷಿಣದಲ್ಲಿ ಇವೆ. ಪಶ್ಚಿಮದಲ್ಲಿ ಭಗ್ನಗೊಂಡಿದೆ. ಅವಶೇಷಗಳ ರಾಶಿ ಇದೆ. ಗೋಡೆಯಿಂದ ಹೊರಚಾಚಲ್ಪಟ್ಟ ಕಲ್ಲುಗಳು ನೀರಿನಿಂದ ಹೊರಗೂ ಕಾಣಿಸುತ್ತವೆ. ಮಣ್ಣಿನಲ್ಲಿ ಮಾಡಿದ ಕೊಳವೆಗಳನ್ನು ದಪ್ಪನಾದ ಗಾರೆಯಲ್ಲಿ ಇಡಲಾಗಿದ್ದು ಅವು ಈ ಪಶ್ಚಿಮದ ಅವಶೇಷಗಳ ರಾಶಿಯಲ್ಲಿ ಕಂಡುಬರುತ್ತವೆ. ಈ ಕೊಳವೆಗಳ ಕಟ್ಟಡದ ಹಿಂಭಾಗಕ್ಕೆ ನೀರನ್ನು ಕೊಂಡೆಯ್ಯುತ್ತಿರಬಹುದು. ಈ ಕೊಳವೆಗಳನ್ನು ಗೋಡೆಯಲ್ಲಿ ಸಿಕ್ಕಿಸಿದ್ದು ಸಹ ಕಂಡುಬಂದಿದೆ. ಒಂದು ಹೊಸ ಗೋರಿ ಕಲ್ಲು ಕಂಡುಬಂದಿದೆ.

## ೪೨. ಕಮಲಾಪುರದ ದಾದಾಪೀರ್ ಛತ್ರ

ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲೂಕಿನ ಕಮಲಾಪುರ ಪಟ್ಟಣದಲ್ಲಿ ದಾದಾಪೀರ್ ಧರ್ಮಛತ್ರವನ್ನು ಸಾರ್ವಜನಿಕ ವಂತಿಗೆಯಿಂದ ಕಟ್ಟಲಾದುದು. ಇಲ್ಲಿ ಯಾತ್ರಿಕರು ಉಚಿತವಾಗಿ ಮೂರು ದಿನ ತಂಗಬಹುದಿತ್ತು.

ಇದು ಹೊಸಪೇಟೆಯಿಂದ ಕಂಪ್ಲಿಗೆ ಹೋಗುವಾಗ ಕಮಲಾಪುರಕ್ಕೆ ಪ್ರವೇಶ ಮಾಡುವ ಮೊದಲು ಬಲಭಾಗದಲ್ಲಿ ಮೊದಲೇ ಕಾಣುತ್ತದೆ. ಕಮಲಾಪುರದ ನೈರುತ್ಯಕ್ಕಿರುವ ಪ್ರಸ್ತುತ ಛತ್ರವನ್ನು ಸೈಯದ್ ಶಂಸುದ್ದೀನ್ ಖಾದ್ರಿ ಉರ್ಫ್ ದಾದಾಪೀರ್ ನಿರ್ಮಿಸಿದ. ಈತನ ಮೂಲನಾಮ ಶಂಸುದ್ದೀನ್ ಖಾದರಿ. ದಾದಾಪೀರ್ ಎಂದು ಜನಸಾಮಾನ್ಯರು ಕರೆದರು. ಇವರು ಪೂರ್ವಿಕರು ರಾಜಕೀಯ ವಿಪ್ಲವ ಸಹಿಸಲಾರದೆ ದೆಹಲಿ ಹತ್ತಿರದ ನಸಿರಾಬಾದ್‌ನಿಂದ ಸೈಯದ್ ನೂರಾಲ್ಲಾ ಖಾದ್ರಿ ನೇತೃತ್ವದಲ್ಲಿ ಆನೆಗೊಂದಿ ಅರಸನ ಬಳಿ ಬಂದರು ಅರಸ ಇವರಿಗೆ ಕಮಲಾಪುರ ಉತ್ತರ ಭಾಗದ ಅಲ್ಪಭೂಪ್ರದೇಶವನ್ನು ಇತರ ಸವಲತ್ತುಗಳನ್ನು ಕೊಟ್ಟು ಇಸ್ಲಾಮಿಕ್ ಸುನ್ನಿ ಪಂಗಡದ ದಾದಾಪೀರ್ ವಂಶಸ್ಥರು, ಗುರು ಪರಂಪರೆಯಂತೆ ಬೆಳೆದುಬಂದರು. ಹತ್ತಾರು ತಲೆಮಾರಿನ ಚರಿತ್ರೆ ದಾದಾಪೀರ್ ೧೨ನೆಯ ಗುರು ಆತನ ತಮ್ಮ ಸೈಯದ್ ಯಾಸೀನ್ ಪೀರ್ ಖಾದ್ರಿ ಉತ್ತರಾಧಿಕಾರಿ, ಕಮಲಾಪುರ ಜಾಮೀಯ ಮಸೀದಿ ಪಕ್ಕದ ಮನೆಯಲ್ಲಿ ಇವರ ಮನೆತನದವರಿದ್ದಾರೆ.

ಹಿಂದೂ-ಮುಸ್ಲಿಂ ಏಕತೆ ದೃಷ್ಟಿಯಿಂದ ನಿರ್ಮಿತ ಕಟ್ಟವಿದು. ಬಡವ, ಬಲ್ಲದವರಿಗಾಗಿ ಭಕ್ತರಿಗಾಗಿ ಸ್ವಂತ ಖರ್ಚಿನಿಂದ ಹಿತೈಷಿಗಳ ಹಣದಿಂದ ಕಟ್ಟಡ ಪೂರ್ಣಗೊಂಡಿತು. ಈತನ ಇತರ ಕಟ್ಟಡಗಳಲ್ಲಿ ಕಮಲಾಪುರದ ಏಳನೆಯ ವಾರ್ಡಿನ ಜಾಮೀಯ ಮಸೀದಿಯೂ ಒಂದು. ಅಲ್ಲದೆ ತನ್ನ ವಾಸದ ವಿಶಾಲ ಮಂದಿರವನ್ನು ಸ್ಥಳೀಯ ಕಚ್ಚಾವಸ್ತು ಬಳಸಿ ಅಂದಿನ ಆಧುನಿಕ ಶೈಲಿಯಲ್ಲಿ ಕಟ್ಟಿರುವುದು ಗಮನಾರ್ಹ. ದಾದಾಪೀರ್ ಆಯುರ್ವೇದ ವೈದ್ಯ ಗಿಡಮೂಲಿಕೆಗಳಿಂದ ಔಷಧಿ ತಯಾರಿಸುತ್ತಿದ್ದ ಭೂತ ಪಿಶಾಚಿ ಬಿಡಿಸುತ್ತಿದ್ದರೆಂದು ಮರಿಮೊಮ್ಮಕ್ಕಳ ಸ್ಮೃತಿಗಳಿಂದ ತಿಳಿದುಬರುತ್ತದೆ. ಧರ್ಮನಿಷ್ಠೆ ದಾದಾಪೀರ್ ಹಿಂದೂ - ಮುಸ್ಲಿಮರನ್ನು ಸಮಾನವಾಗಿ ಕಂಡರು ಇವರು ಮನೆಯಿಂದ ಹಿರಿಯರ ದರ್ಗಾಗೆ ಹೋದರೆ ಭಕ್ತಾಧಿಗಳು ಸಾಲು ಸಾಲಾಗಿ ನಿಂತು ಪಾದಕ್ಕೆ ನಮಸ್ಕರಿಸುತ್ತಿದ್ದರು. ವಿಜಯನಗರೋತ್ತರ ಕಾಲದ ಛತ್ರಗಳಲ್ಲಿ ಇದಕ್ಕೆ ಮಹತ್ವವಿದೆ.[೧೧]

ಇಲ್ಲಿ ಹಿಂದೂ, ಮುಸ್ಲಿಂ ವಾಸ್ತುಶೈಲಿಯನ್ನು ಮಿಶ್ರಗೊಳಿಸಲಾಗಿದೆ. ಸ್ಥಳೀಯ ನುರಿತ ಕೆಲಸಕಾರರಿಂದ ಕಟ್ಟಡ ಪೂರ್ಣವಾಗಿದೆ. ಪಶ್ಚಿಮ ದಿಕ್ಕಿಗೆ ಪ್ರವೇಶದ್ವಾರವಿದ್ದು, ಆರು ತರದ ಕಮಾನು ಕಿಟಕಿಗಳಿವೆ. ಛತ್ರದ ಮಧ್ಯದಲ್ಲಿ ತೆರೆದ, ಚೌಕಾಕಾರದ ಮಂಟಪದಂತಿದೆ. ಇಲ್ಲಿ ಗಾಳಿ, ಬೆಳಕು ಸಮೃದ್ಧವಾಗಿ ಪೂರೈಕೆಯಾಗುತ್ತದೆ. ಪೂರ್ವ ದಿಕ್ಕಿಗೆ ಇದರ ಸಂಬಂಧವಾಗಿ ತೋಡಿಸಿದ ನೀರಿನ ಬಾವಿ ಇದೆ.

**ಆನೆಗೊಂದಿ :**

ಆನೆಗೊಂದಿಯಲ್ಲಿ ಸಹ ಇಂಡೋ-ಇಸ್ಲಾಮಿಕ್ ಶೈಲಿಗೆ ಸಂಬಂಧಿಸಿದ ಸ್ಮಾರಕಗಳಿವೆ. ಒಂದು ಗಗನಮಹಲ್ ಮತ್ತು ಲಕ್ಷ್ಮಿಮಹಲ್, ಗಗನಮಹಲನ್ನು ಈಗ ಪಂಚಾಯತ್ ಕಟ್ಟಡವನ್ನಾಗಿ ಉಪಯೋಗಿಸಲಾಗುತ್ತದೆ. ಮತ್ತು ಲಕ್ಷ್ಮಿ ಮಹಲನ್ನು ಮಹಿಳಾ ಸಮುದಾಯ ಕೇಂದ್ರವಾಗಿ ಉಪಯೋಗಿಸಲಾಗುತ್ತದೆ. ಉಳಿದ ರಚನೆಗಳು ಪಟ್ಟಣ (ಆನೆಗೊಂದಿ)ದ ಪಶ್ಚಿಮ ಭಾಗದ ಕೋಟೆಯ

ಮೇಲ್ಭಾಗದಲ್ಲಿ ಕಂಡುಬಂದಿವೆ. ಅವುಗಳಲ್ಲಿ ಕೋಟೆಯ ದ್ವಾರ ಬಾಗಿಲು ಮತ್ತು ಶಿಥಿಲಗೊಂಡ ಜಲಮಂಟಪ.[೨]

### ೧. ಗಗನ ಮಹಲ್

ಇದು ಆಯತಾಕಾರದಲ್ಲಿದ್ದು, ಮೂರು ಹಂತಗಳನ್ನು ಹೊಂದಿದೆ. ಕೆಳ ಅಂತಸ್ತು ಹೆಚ್ಚು ಕಡಿಮೆ ಪ್ರವೇಶಿಸಲು ಸಾಧ್ಯವಿಲ್ಲ. ಪಶ್ಚಿಮದಲ್ಲಿ ಒಂದು ಕೋಣೆ ಮಾತ್ರ ಇದೆ. ಮುಖ್ಯ ಅಂತಸ್ತು (ಎರಡನೆಯದು) ಪ್ರವೇಶಿಸಲು ಅಷ್ಟಭುಜಾಕೃತಿ ಮೆಟ್ಟಿಲುಗಳ ಗೋಪುರವಿದೆ. ಇದು ಮೇಲ್ಭಾಗದಲ್ಲಿ ಮುಚ್ಚಲ್ಪಟ್ಟಿದೆ. ಈಗ ನಿರ್ಮಿಸಿರುವ ಮೆಟ್ಟಿಲುಗಳ ಮೂಲಕ ಎರಡನೆಯ ಅಂತಸ್ತನ್ನು ಪ್ರವೇಶಿಸಬಹುದು ಅಲ್ಲಿಂದ ಮುಂದೆ ಪೂರ್ವದಲ್ಲಿ ತೆರೆದ ಅಂಗಳ ಇದೆ. ಅಲ್ಲಿನ ದ್ವಾರವು ಮೂರು ದಕ್ಷಿಣೋತ್ತರದಲ್ಲಿರುವ ಕೋಣೆಗಳಿಗೆ ತೆರೆದುಕೊಳ್ಳುತ್ತದೆ. ಮಧ್ಯದ ಕೋಣೆಯು ಆಯತಾಕಾರದಲ್ಲಿದೆ. ಉಳಿದ ಎರಡು ಕೋಣೆಗಳು ಚೌಕಾಕಾರದಲ್ಲಿವೆ. ಪ್ರತಿ ಭಾಗದಲ್ಲಿಯೂ ಕುಳಿತುಕೊಳ್ಳಲು ಅನುವಾಗುವಂತಹ ಬಾಲ್ಕನಿಗಳನ್ನು ಹೊರಭಾಗದಲ್ಲಿ ತೆರೆಯಲಾಗಿದೆ. ಮೇಲ್ಛಾವಣಿಯು ಮೂರು ಎತ್ತರದ ಗೋಪುರಗಳವರೆಗೆ ಇದೆ. ಸುತ್ತಲೂ ಗೋಡೆಯನ್ನು ಕಟ್ಟಲಾಗಿದೆ. ಆದರೆ ಅದು ಪೂರ್ತಿಯಾಗಿಲ್ಲ.

### ಹೊರಭಾಗ :

ಪಶ್ಚಿಮದ ಮುಖ್ಯ ಮುಂಭಾಗವು ಎರಡು ಅಂತಸ್ತುಗಳ ಹೊರ ಪ್ರಕ್ಷೇಪ (projection)ನ್ನು ಹೊಂದಿದೆ. ಕೆಳಗಿನ ಅಂತಸ್ತು ಯಾವುದೇ ವಿಶೇಷ ರಚನೆಯನ್ನು ಹೊಂದಿಲ್ಲ. ದ್ವಾರಬಾಗಿಲನಲ್ಲಿ ಚೌಕಟ್ಟಿನಲ್ಲಿ ಆಯತಾಕಾರದ ರಚನೆಗಳಿವೆ. ಕಮಾನಿನ ಮೇಲೆ (ಗಿಲಾವ್) ಪ್ಲಾಸ್ಟರ್‌ನಲ್ಲಿ ಚಿತ್ರಗಳನ್ನು ಮಾಡಲಾಗಿದೆ. ಮೂರು ಹೊರ ಬಾಲ್ಕನಿಗಳಲ್ಲಿ ಅಲಂಕಾರ ಪಟ್ಟಿಗಳನ್ನು ವೃತ್ತಾಕಾರದ ರಚನೆಗಳನ್ನು ಮಾಡಲಾಗಿದೆ. ಇವುಗಳಿಗೆ ಆಸರೆಯಾಗಿ ಹೊರ ಚಾಚಲ್ಪಟ್ಟ ಕಲ್ಲುಗಳನ್ನು ಜೋಡಿಸಲಾಗಿದೆ. ಒಂದು ಇಳಿಜಾರಿನ ತೊಲೆಯಂತಹ ಸಣ್ಣ ರಚನೆಯನ್ನು ಮತ್ತು ದಳಗಳ ಅಲಂಕಾರ ಪಟ್ಟಿಯನ್ನು (Frieze of petaled) ಕಮಾನಿನ ತೆರವುಗಳ ತನಕ ಕೊಂಡೊಯ್ಯಲಾಗಿದೆ. ಈ ತೆರವುಗಳು ಬಹು ಅಂಚನ್ನು ಹೊಂದಿವೆ. ಮೇಲೆ ಚೌಕಕಾರದ ತೆರವುಗಳನ್ನು ಬಿಡಲಾಗಿದೆ. ಕೆಳ ತೆರವುಗಳಲ್ಲಿ ಗೋಡೆಯಂತಹ ಸಣ್ಣ ರಚನೆಯಿದೆ. ಶಿಥಿಲಗೊಂಡ ಇಟ್ಟಿಗೆಯ ಕೆಲಸದಲ್ಲಿ ದಂಡೆಯ (ಅಂಚು) ಕುರುಹನ್ನು ಕಾಣಬಹುದು.

ಗೋಡೆಗಳಲ್ಲಿ ದಕ್ಷಿಣ ಮತ್ತು ಉತ್ತರದ ಬಾಲ್ಕನಿಗಳಲ್ಲಿ ಬಹು ಅಂಚಿನ ರಚನೆ ಇದೆ. ಈ ಗೋಡೆಗಳು ಬಹುತೇಕ ಸಾದಾ ಇದ್ದು ಕೇವಲ ತೆಳ್ಳಗಿನ ಪಟ್ಟಿಯನ್ನು ಮಾಡಲಾಗಿದೆ. ಮಧ್ಯದ ಗೋಡೆಯ ಮೂಲೆಗಳಲ್ಲಿ ದೊಡ್ಡ ದೊಡ್ಡ ಕಂಬಗಳನ್ನು ಮತ್ತು ಅವುಗಳ ಮೇಲೆ ಆಸರೆಯಾಗಿ ಕೂಡಿಸಲಾಗಿದೆ. ಛತ್ತಿನಲ್ಲಿಕೋನಾಕೃತಿಯ ತೊಲೆಗಳಿವೆ. ಅವುಗಳ ಆಸರೆಗಾಗಿ ಎರಡು ವಕ್ರವುಳ್ಳ ರಚನೆಗಳನ್ನು ಮಾಡಲಾಗಿದೆ. ಮೇಲ್ಛಾವಣೆಯಲ್ಲಿ ಮೂರು ಗೋಪುರಗಳಿವೆ. ಮಧ್ಯದ ಗೋಪುರದಲ್ಲಿ ಮೂರು ಕಮಾನಿನ ತೆರವು ಇದೆ.

ಅದಕ್ಕೆ ಮಧ್ಯದಲ್ಲಿ ಸ್ತಂಭಗಳನ್ನು ಮತ್ತು ಕಮಲದ ಅಲಂಕಾರಗಳನ್ನು ಕೆಳಭಾಗದಲ್ಲಿ ಮಾಡಲಾಗಿದೆ. ಅದರ ಮೇಲೆ ಮೂರು ಹಂತದ ದ್ವಿಚಕ್ರವುಳ್ಳ ಛತ್ತನ್ನು ಆಯತಾಕಾರದಲ್ಲಿ ಕೂಡಿಸಲಾಗಿದೆ. ಅದು ಗುಮ್ಮಟ ರಚನೆಯನ್ನು ಹೊಂದಿದೆ. ಪಕ್ಕದ ಎರಡು ಗೋಪುರಗಳ ರಚನೆ ಇದೇ ತೆರನಾಗಿದ್ದು, ಅವು ಗಾತ್ರದಲ್ಲಿ ಸಣ್ಣವು. ಆದರೆ ಇಲ್ಲಿ ಕೇವಲ ಎರಡು ಹಂತದ ಕಮಾನುಗಳಿವೆ. ಅದರ ಅಂಚಿನ ಕೆಲವು ಭಾಗಗಳು ಉಳಿದುಕೊಂಡಿವೆ.

ಎರಡನೆಯ ಅಂತಸ್ತಿನ ಪೂರ್ವ ಮುಂಭಾಗವು ಕಮಾನುಗಳುಳ್ಳ ಬಾಗಿಲು ಮತ್ತು ಕಿಟಕಿಗಳನ್ನು ಹೊಂದಿದೆ. ಒಂದು ಬಾಗಿಲು ಮೇಲೆ ಸುರಳಿಯಾಕಾರದ ಎಲೆಗಳ ಚಿತ್ರಗಳನ್ನು ಮಾಡಲಾಗಿದೆ. ಇಲ್ಲಿ ವಿಭಾಗಗಳನ್ನಾಗಿ ಮಾಡುವ ಗೋಡೆಗಳಲ್ಲಿ ತೆಳ್ಳನೆಯ ಚೌಕ ಸ್ತಂಭಗಳನ್ನು ಕೂಡಿಸಲಾಗಿದೆ. ತೊಲೆಗಳನ್ನು ಅಡ್ಡಲಾಗಿ ಹಾಕಿದ ಕಂಬಗಳು, ಆಸರೆಗಾಗಿ ರಚನೆಗಳನ್ನು ಹೊಂದಿವೆ (Bracket - ಗೋಡೆಯಿಂದ ಮುಚಾಚಿರುವ ಭಾಗ). ಮೇಲೆ ಗೋಡೆಗಳು ಚೌಕ ಸ್ತಂಭಗಳನ್ನು ನಿರ್ಮಿಸಲಾಗಿದೆ. ದಕ್ಷಿಣದ ಭಾಗದಲ್ಲಿ ಚೂಪಾಗಿರುವ ಅಷ್ಟಭುಜಾಕೃತಿಯ ಗೋಪುರದ ಮೆಟ್ಟಿಲುಗಳಿವೆ. ಇದನ್ನು ನಂತರ ಜೋಡಿಸಲಾಗಿದೆ. ಇದರಲ್ಲಿಯೂ ಸಹ ಮೊನೆಯುಳ್ಳ (pointed) ಕಮಾನಿನ ತೆರವುಗಳಿವೆ.

**ಒಳಭಾಗ :**

ನೆಲ ಅಂತಸ್ತಿನ ಕೋಣೆಗೆ ಕಮಾನುಳ್ಳ ಮೇಲ್ಛಾವಣಿಯನ್ನು ನಿರ್ಮಿಸಲಾಗಿದೆ ಮತ್ತು ಇತರ ಕೋಣೆಗಳಲ್ಲಿಯೇ ಇದೇ ತೆರನಾದ ಮೆಲ್ಛಾವಣಿಯನ್ನು ನಿರ್ಮಿಸಲಾಗಿದೆ. ಅಲ್ಲಿ ಅಳವಡಿಸಲಾದ ಆಸರೆ ಕಲ್ಲುಗಳು ಕೆಳಗಿವೆ. ಅಲ್ಲಿ ಗೂಡುಗಳು ಸಮನಾಗಿದ್ದು, ಇಟ್ಟಿಗೆ ಮತ್ತು ಗಚ್ಚು ಬಳಸಲಾಗಿದೆ. ಪಕ್ಕದ ಕೋಣೆಯಲ್ಲಿ ಅಡ್ಡಲಾಗಿ ಹಾಕಲಾದ ತೊಲೆಗಳು ಛಾವಣಿಯಲ್ಲಿ ಒಂಭತ್ತು ಚೌಕಗಳನ್ನು ನಿರ್ಮಿಸಿವೆ.

**೨. ಲಕ್ಷ್ಮಿ ಮಹಲ್**

ಈ ಮಂಟಪವು ೩-೨ ಭಾಗದಲ್ಲಿದ್ದು, ಉತ್ತರ-ದಕ್ಷಿಣದಲ್ಲಿದೆ. ಇದು ಪೂರ್ವಕ್ಕೆ ತೆರೆದುಕೊಂಡಿದೆ (ಪೂರ್ವಕ್ಕೆ ಮುಂಭಾಗ). ಹಿಂಭಾಗದಲ್ಲಿ (ಪಶ್ಚಿಮದಲ್ಲಿ) ಕಮಾನುಗಳಿವೆ. ಉತ್ತರದ ಎರಡು ಭಾಗಗಳನ್ನು ಮುಚ್ಚಲಾಗಿದೆ.

**ಹೊರಭಾಗ :**

ಈ ಮಂಟಪದ ಮುಖ್ಯ ಭಾಗವು ಪೂರ್ವಕ್ಕಿದ್ದು, ಅದು ಕಮಾನುಗಳುಳ್ಳ ಬಾಗಿಲು ಹೊಂದಿದೆ. ಗೋಡೆಗಳಲ್ಲಿ ಸಣ್ಣ ಕಂಬಗಳ ಗುರುತು ಕಂಡುಬರುತ್ತದೆ. ಆದರೆ ಅವುಗಳಿಗೆ ದಪ್ಪನಾಗಿ ಬಣ್ಣ ಬಳಿಯಲಾಗಿದೆ. ಗೋಡೆಯ ಮೇಲೆ ದಪ್ಪವಾಗಿ ಸೂರು ಹಾಕಲಾಗಿದ್ದು. ಅದಕ್ಕೆ ಬೇರೆ ಗೂಡು-ಮಾಡಿಲ್ಲ. ಅವು ಉತ್ತರ ಮತ್ತು ದಕ್ಷಿಣ ಗೋಡೆಯನ್ನು ಆವರಿಸಿಕೊಂಡಿವೆ. ಸೂರಿನ ಕೆಳಗೆ ಕಮಲದ ದಳಗಳ

ಅಲಂಕಾರ ಪಟ್ಟಿಯನ್ನು ನಿರ್ಮಿಸಲಾಗಿದೆ. ಅದರ ಮೇಲೆ ಗೋಡೆ ಮತ್ತು ಗೋಡೆಯಲ್ಲಿ ಕಮಾನುಗಳ ರಚನೆ, ಈ ಕಮಾನುಗಳು ಸಮತಟ್ಟಾದ ಕಂಬಗಳಿಂದ ಪ್ರತ್ಯೇಕಿಸಲ್ಪಟ್ಟಿದೆ. ಅಲ್ಲಲ್ಲಿ ಗಿಡ, ಬಳ್ಳಿ, ಹೂಗಳ ಅಲಂಕಾರ ಪಟ್ಟಿಯನ್ನು ಮಾಡಲಾಗಿದೆ.

**ಒಳಭಾಗ :**

ಎರಡು ಸಮತಲದಲ್ಲಿರುವ ದೊಡ್ಡ ಕಮಾನುಗಳು ಒಳಭಾಗಕ್ಕೆ ತೆರೆದುಕೊಂಡಿವೆ. ಛತ್ತು (ceilngs)ಗಳು ಅಡ್ಡಲಾಗಿದ್ದು ಅಲ್ಲಲ್ಲಿ ಅಲಂಕಾರ ಪಟ್ಟಿಯನ್ನು ಮಾಡಲಾಗಿದೆ. ಛತ್ತನ್ನು ಒಂಭತ್ತು (The ceilings are divided into nine intersection) ಭಾಗಗಳನ್ನಾಗಿ ಮಾಡಲಾಗಿದೆ. ಉತ್ತರದ ಗೋಡೆಯಲ್ಲಿರುವ ಬಾಗಿಲಿಯ ಮೇಲೆ ಮೇಲ್ಛಾವಣಿಯ ಮೂರು ಹಂತಗಳನ್ನು ಮಾಡಲಾಗಿದೆ.

**೩. ಕೋಟೆಯ ಮೇಲ್ಭಾಗದ ದ್ವಾರಬಾಗಿಲು**

ಕೋಟೆಯ ಎರಡು ಬೃಹತ್ ಗೋಡೆಗಳ ಮಧ್ಯ ಈ ದ್ವಾರ ಇದೆ. ಇದರ ಮೂಲಕ ಕೊತ್ತಲದ (citadel) ಮೇಲ್ಭಾಗಕ್ಕೆ ಹೋಗಬಹುದು.

ಎರಡು ವೃತ್ತಾಕಾರದ ಬುರುಜುಗಳ ಮಧ್ಯ ಪೂರ್ವ - ಪಶ್ಚಿಮವಾಗಿ ಈ ಬಾಗಿಲಿದೆ. ಈ ಬುರುಜುಗಳು ದೊಡ್ಡ ಹೆಬ್ಬಂಡೆಯ (bastion) ಮೇಲೆ ನಿರ್ಮಿಸಲ್ಪಟ್ಟಿವೆ. ಈ ದ್ವಾರದ ಮುಖ್ಯಭಾಗ ಪೂರ್ವಕ್ಕೆ ಇದೆ. ಈ ದ್ವಾರದ ಮೇಲೆ ಒಂದು ಸಣ್ಣ ಕೋಣೆಯಿದ್ದು ಅದು ಛಾವಣಿಯನ್ನು ಹೊಂದಿದೆ.

**ಹೊರಭಾಗ :**

ಇದರ ಮುಂಭಾಗದಲ್ಲಿ ಯಾವುದೇ ಅಲಂಕಾರ ಇಲ್ಲ. ಮಧ್ಯದಲ್ಲಿ ಗಣೇಶನ ಕೆತ್ತನೆ ಇದೆ. ಅದರ ಜೊತೆಗೆ ಗರುಡ ಮತ್ತು ಮತ್ತು ಆದಿಶೇಷ (serpent)ನ ಮೀನಿನ ಕೆತ್ತನೆಗಳಿವೆ. ನಾಲ್ಕು ಆಸರೆಗಾಗಿ ಹೊರಚಾಚಿಲ್ಪಟ್ಟ ಕಲ್ಲುಗಳಿವೆ. ಅದರ ಮೇಲೆ ಗೋಡೆಯಿದ್ದು ಅದು ಬಾಲ್ಕನಿಯನ್ನು ಎತ್ತಿಹಿಡಿದಿವೆ. ಇಟ್ಟಿಗೆಯಲ್ಲಿ ಅಲಂಕಾರ ಪಟ್ಟಿಯನ್ನು ಪುನರಾವರ್ತನೆಗೊಂಡಿದೆ. ಮೂರು ಕಮಾನಿನಾಕೃತಿಯ ತೆರವುಗಳಿದ್ದು ಅವುಗಳ ಮೇಲೆ ಪಟ್ಟಿಯಲ್ಲಿ ಕಮಲದ ಅಲಂಕಾರ ಮಾಡಲಾಗಿದೆ. ಮೇಲೆ ದೊಡ್ಡ ಅಲಂಕಾರ ಪಟ್ಟಿ ಇದೆ.

**ಒಳಭಾಗ :**

ದ್ವಾರಬಾಗಿಲುಗಳಿಗೆ ಅಲಂಕಾರವಿಲ್ಲ. ಅಡಿಪಾಯದ ಗೋಡೆಯನ್ನು ಹೊಂದಿದೆ. ಮೇಲಿನ ಅಡ್ಡ ತೊಲೆಗೆ ಅರ್ಧ ಅಷ್ಟಾಕೃತಿಯ ಕಂಬಗಳನ್ನು, ಕೋನಾಕೃತಿಯ ಹೊರಕಲ್ಲುಗಳ ಮೇಲೆ ಇಡಲಾಗಿದೆ. ಅದರ ಮೇಲೆ ಛಾವಣಿಗಾಗಿ ಹಾಸುಗಲ್ಲುಗಳನ್ನು (roof slab) ಜೋಡಿಸಲಾಗಿದೆ. ಮೇಲೆ ಕೋಣೆಗೆ

ಹೋಗಲು ಛಾವಣಿಯನ್ನು ಉಪಯೋಗಿಸಬೇಕು ಅದಕ್ಕೆ ಉತ್ತರದಲ್ಲಿ ದ್ವಾರವಿದೆ. ದ್ವಾರಕ್ಕೆ ಇಟ್ಟಿಗಿಯ ಗಿಲಾವನ್ನು ಪ್ಲಾಸ್ಟರನ್ನು ಬಳಸಲಾಗಿದೆ (ಅದು ಶಿಥಿಲಗೊಂಡಿದೆ). ಛತ್ತಿನ ಮೇಲ್ಭಾಗದಲ್ಲಿ ಕಾಂಕ್ರೀಟನ್ನು ಹಾಕಲಾಗಿದೆ. ದಂಡೆಯ ಗೋಡೆಯ (parapet) ಮೇಲೆ ಎರಡು ಬದಿಯಲ್ಲಿ ಕಮಾನುಗಳಿವೆ.

**೪. ಕೋಟೆಯ ಮೇಲ್ಭಾಗದ ಜಲಮಂಟಪ**

ಈ ಸ್ಮಾರಕವು ಬಹುತೇಕ ಕುಸಿದು ಹೋಗಿದ್ದು, ಅದರ ಮೇಲೆ ಗಿಡಗಂಟಿಗಳು ಬೆಳೆದಿವೆ. (over grown) ಸದ್ಯ ಕೆಲವು ಹೊರ ಆವರಣದ ಗೋಡೆಗಳು ಮತ್ತು ಒಳಗಿನ ಒಂದೆರಡು ಗೋಡೆಗಳು ನಿಂತಿವೆ. ಇದನ್ನು ಸಣ್ಣ ಕಲ್ಲುಗಳಿಂದ ಗಚ್ಚನ್ನು ಉಪಯೋಗಿಸಿ ನಿರ್ಮಿಸಲಾಗಿದೆ. ದ್ವಾರ ಮತ್ತು ಕಮಾನುಗಳಿಗೆ ಇಟ್ಟಿಗಿಯನ್ನು ಉಪಯೋಗಿಸಲಾಗಿದೆ. ಅಲ್ಲಲ್ಲಿ ಇನ್ನು ಗಿಲಾವು ಪ್ಲಾಸ್ಟರ್ ಕಂಡುಬರುತ್ತದೆ.

ಈ ಮಂಟಪವು ಸಮಮಿತಿಯಲ್ಲಿ ನಿರ್ಮಾಣಗೊಂಡಿದೆ. ಮುಂಭಾಗದ ಕೋಣೆಯ ಪೂರ್ವ ದಿಕ್ಕಿನ ಮಧ್ಯದಲ್ಲಿದ್ದು ಅದು ಕೇಂದ್ರ (ಮುಖ್ಯ) ಕೋಣೆಯ ಮೂಲಕ (ನೀರಿರಡೆಗೆ) ಕೊಂಡೊಯ್ಯುತ್ತದೆ. ಈ ಕೋಣೆಯಿಂದ ಸ್ವಲ್ಪ ದೂರದಲ್ಲಿ ಹಲವಾರು ಸಣ್ಣ ದೊಡ್ಡ ಆಯತಾಕಾರದ ಕೋಣೆಗಳಿವೆ. ಅವುಗಳ ಗೋಡೆಗಳು ಕುಸಿದು ಹೋಗಿವೆ. ಅವುಗಳನ್ನು ಗುರುತಿಸುವುದೂ ಸಹ ಕಷ್ಟ.

ಕಮಾನಿನ ದ್ವಾರಗಳು ಸಣ್ಣ ಪ್ರಾರ್ಥನಾ ಗೂಡುಗಳು (niche) ಅದರ ಮೇಲೆ ಸುರಳಿ ಚಿತ್ರಗಳು ಈ ಸ್ಮಾರಕದ ಪ್ರಮುಖ ಗುಣಲಕ್ಷಣಗಳಿವೆ. ಗಮನ ಸೆಳೆಯುವ ಅಂಶವೆಂದರೆ ಗೋಡೆಯಲ್ಲಿ ಸಾಲಾಗಿ ಕಿಂಡಿಗಳನ್ನು ಬಿಡಲಾಗಿವೆ. ಅವು ಬೇರೆ ಕಟ್ಟಿಗೆಗಳಿಗೆ ಆಸರೆ ನೀಡಿದ್ದಿರಬಹುದು. ಅಲ್ಲಲ್ಲಿ ಬಿದ್ದು ಹೋದ ಕೋಣೆಯ ಅವಶೇಷಗಳಿವೆ. ಹೊರಭಾಗ ಸಾದಾ (plain) ಆಗಿದೆ.

ಕಮಲಾಪುರದಿಂದ ಪೂರ್ವಕ್ಕೆ ಸುಮಾರು ೪.೫ ಕಿ.ಮೀ ದೂರದಲ್ಲಿರುವ ನಲ್ಲಾಪುರದ ಹತ್ತಿರ ಚಿಕ್ಕದಾದ ಗೋರಿ ಕಟ್ಟಡವೊಂದರ ರಚನೆಯನ್ನು ಕಾಣಬಹುದು. ಇದು ಚೌಕಾಕಾರದ ತಲವಿನ್ಯಾಸ ಹೊಂದಿದ್ದು, ಮೇಲ್ಭಾಗದಲ್ಲಿ ಗುಮ್ಮಟವಿದೆ. ಗುಮ್ಮಟವು ಜ್ಯಾಮಿತಿಯ ಅಲಂಕಾರವನ್ನು ಹೊಂದಿದೆ. ಮಸೀದಿಗಳು ಹೊಸಪೇಟೆ ತಾಲ್ಲೂಕಿನಾದ್ಯಂತ ಕಂಡುಬರುತ್ತದೆ. ಕಮಲಾಪುರ, ಬೈಲುವದ್ದಿ ಗೋರಿ, ಕೊಟಗಿನ ಹಾಳು, ಗಾದಿಗನೂರು, ಗುಂಡ್ಲವದ್ದಿಗೇರಿ, ಧರ್ಮಸಾಗರ, ಇಂಗಳಗಿ, ಪಾಪಾಯಕನಹಳ್ಳಿ, ವಡ್ಡರಹಳ್ಳಿ, ಕಾರಿಗನೂರು, ಕಾಡುಬಾಳು, ವೆಂಕಟಾಪುರ, ಕಡ್ಡಿರಾಮಪುರ, ಬೂವನಳ್ಳಿ, ಕೊಂಡನಾಯಕನಹಳ್ಳಿ, ಹೊಸಮಲಪನ ಗುಡಿ ಮತ್ತು ಬುಕ್ಕಸಾಗರದಲ್ಲಿ ಮಸೀದಿಗಳಿವೆ.

ಕಂಪ್ಲಿ, ರಾಮಸಾಗರ, ಜವುಕು, ಮೆಟ್ರಿ ದೇವಲಾಪುರ, ಸೋಮಲಾಪುರ, ಹಂಪದೇವನಹಳ್ಳಿ, ಮುದ್ದಾಪುರ, ಬೆಳಗೋಡುಗಳು ಮತ್ತು ಇಟಗಿ ಗ್ರಾಮಗಳಲ್ಲಿ ಮಸೀದಿಗಳಿವೆ. ಹೊಸಪೇಟೆ ಕಸಬಾ ಹೋಬಳಿಯಲ್ಲಿ ನಾಗೇನಹಳ್ಳಿ, ಅನಂತಶಯನಗುಡಿ, ಕೊಂಡನಯಕನ ಹಳ್ಳಿ, ಗುಡಿಓಬಳಾಪುರ, ಸಂಕ್ಲಾಪುರ, ಹೊಸೂರು ಮತ್ತು ಕಲ್ಲಾಹಳ್ಳಾ ಗ್ರಾಮಗಳಲ್ಲಿ ಮಸೀದಿಗಳು ಕಂಡುಬರುತ್ತವೆ.

ಮರಿಯಮ್ಮನಹಳ್ಳಿ ಹೋಬಳಿಯ ವ್ಯಾಸನಕೆರೆ, ಅಯ್ಯನಹಳ್ಳಿ, ಮರಿಯಮ್ಮನಹಳ್ಳಿ, ತಿಮ್ಮಲಾಪುರ, ಡಣ್ಣಾಯಕನಕೆರೆ, ಗರಗ, ಚಿಲಕನಹಟ್ಟಿ, ವೆಂಕಟಾಪುರ, ಡಣಾಪುರ ಮತ್ತು ಗೊಲ್ಲರ ಹಳ್ಳಿಗಳಲ್ಲಿ ಮಸೀದಿಗಳಿವೆ. ಹಾರುವನಹಳ್ಳಿಯಲ್ಲಿ ಒಂದು ಮಸೀದಿ ಹಾಗೂ ಮಾಗಳವಯ್ಯನ ಗುಡ್ಡದಲ್ಲಿ ಬಾಬಾವಲಿಯ ದರ್ಗಾ ಇದೆ.[೧೩]

ಒಟ್ಟಿನಲ್ಲಿ ಹೇಳಬೇಕಾದರೆ ಹಂಪಿ ಪರಿಸರದ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ಶೈಲಿಯ ಸ್ಮಾರಕಗಳು ಹಂಪಿ, ಕಡ್ಡಿರಾಮಪುರ, ಹೊಸಪೇಟೆ, ಕಮಲಾಪುರ, ಮಲಪನಗುಡಿ, ಮತ್ತು ಆನೆಗೊಂದಿ ಮೊದಲಾದ ಕಡೆ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ವಿಶ್ವ ಪರಂಪರೆಯ ಚಾರಿತ್ರಿಕ ಮಹತ್ವವನ್ನು ಪಡೆದ ಸ್ಮಾರಕಗಳ ಪಟ್ಟಿಯಲ್ಲಿ ಹಂಪಿಯು ಒಂದಾಗಿದೆ.

## ಟಿಪ್ಪಣಿಗಳು

೧. ಜಾರ್ಜ್ ಮಿಶೆಲ್, **ವಿಜಯನಗರ ಕೋರ್ಟ್‌ಲೀ ಸ್ಟೈಲ್,** (ಇಸ್ಲಾಮಿಕ್ ಆರ್ಕಿಟೆಕ್ಚರ್) ಪುಟ ೭೦

೨. ಅದೇ, ಪುಟ ೭೧-೭೫

೩. ಜಾರ್ಜ್ ಮಿಶೆಲ್, **ವಿಜಯನಗರ ಕೋರ್ಟ್‌ಲೀ ಸ್ಟೈಲ್,** (ಇಸ್ಲಾಮಿಕ್ ಆರ್ಕಿಟೆಕ್ಚರ್), ಎಟ್ ರಾಯಲ್ ಸೆಂಟರ್, ಪುಟ ೧೦

೪. ಅದೇ, ಪುಟ ೧೧,೧೩

೫. ಅದೇ, ಪುಟ ೧೪,೧೬

೬. ಡಾ.ಸಿ.ಮಹದೇವ ಇತರರು, **ಹೊಸಪೇಟೆ ತಾಲೂಕು ದರ್ಶನ,** ಪುಟ ೧೫೪-೧೫೫

೭. ದೇವಕುಂಜರಿ, ೧೯೭೦, **ಹಂಪಿ ಭಾರತ ಪುರಾತತ್ವ ಸರ್ವೇಕ್ಷಣಾ,** ಪುಟ ೨೫-೨೭

೮. ಜಾರ್ಜ್ ಮಿಶೆಲ್, **ವಿಜಯನಗರ ಕೋರ್ಟ್‌ಲೀ ಸ್ಟೈಲ್,** ಪುಟ ೫೧-೫೨

೯. ಜಾರ್ಜ್ ಮಿಶೆಲ್, **ವಿಜಯನಗರ ಕೋರ್ಟ್‌ಲೀ ಸ್ಟೈಲ್,** (ಇಸ್ಲಾಮಿಕ್ ಆಕೇಟೆಕ್ಚರ್ ಆನೆಗೊಂದಿ), ಪುಟ ೭೮-೨೪

೧೦. ಅದೇ, ಪುಟ ೨೯

೧೧. ಸಾಪ್ತಾಹಿಕ ಪ್ರಭ, (ಕಾನೂನು ವಿಶೇಷ ಅಂಕಣ), **ಕಮಲಾಪುರದ ದಾದಾಪೀರ್ ಛತ್ರ,** ವಿರೂಪಾಕ್ಷಿ ಪೂಜಾರಹಳ್ಳಿ, ಪುಟ ೩

೧೨. ಡಾ.ಸಿ.ಮಹಾದೇವ ಇತರರು, **ಹೊಸಪೇಟೆ ತಾಲೂಕು ದರ್ಶನ,** ಪುಟ [illegible]

೧೩. ಅದೇ, ಪುಟ ೧೮೬

# ಅಧ್ಯಾಯ ಐದು

## ಹಂಪಿಯೇತರ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಸ್ಮಾರಕಗಳು

ಕನಕಗಿರಿ

ಪೆನುಗೊಂಡ

ಚಂದ್ರಗಿರಿ

# ಅಧ್ಯಾಯ ಐದು

## ಹಂಪಿಯೇತರ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಸ್ಮಾರಕಗಳು

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನಲ್ಲಿ ಹಂಪಿ ಎಂಬ ಚಾರಿತ್ರಿಕ ಮಹತ್ವ ಸ್ಥಳವಿದೆ. ಇದು ಹೊಸಪೇಟೆಯಿಂದ ೧೪ ಕಿ.ಮೀ ಈಶಾನ್ಯಕ್ಕಿದೆ. ವಿಶ್ವಪರಂಪರೆ ಸ್ಮಾರಕಗಳ ಪಟ್ಟಿಯಲ್ಲಿ ಇದು ಸಹಾ ಒಂದಾಗಿದ್ದು ಎಷ್ಟು ವಿಶಾಲವಾಗಿದೆ. ಎಂದರೆ "ಜಗತ್ತಿನಲ್ಲಿ ಕಾಂಬೋಡಿಯಾದ ಅಂಕೋರವಾಟಿ ಬಿಟ್ಟರೆ ಹಂಪಿಯೇ ಇಷ್ಟು ವಿಶಾಲ ಹಾಗೂ ಇಷ್ಟೊಂದು ಸ್ಮಾರಕಗಳು ಹಂಪಿ ಮತ್ತು ಹಂಪಿಯೇತರ ಸ್ಥಳದಲ್ಲಿ ಸೇರಿರುವುದೆಂದರೆ ಹಂಪಿ ನಿಜವಾಗಿಯು ಸ್ಮಾರಕಗಳ ಸಂಗ್ರಹಾಲಯ. ಅದನ್ನು ಸಂಗ್ರಹಾಲಯದಂತೆ ಕಾಪಾಡಿಕೊಂಡು ಬರಬೇಕು" ಎಂದು ವಿದೇಶಿ ಪ್ರವಾಸಿಗರು ನುಡಿಯುತ್ತಾರೆ. ಹಂಪೆ ಸುಮಾರು ಒಂಭತ್ತು ಚೌರಸ ಮೈಲು ವಿಸ್ತಾರಗೊಂಡಿದೆ ಎಂದು ಲಾಂಗ್ ಹರ್ಸ್ಟ್ ಮುಂತಾದವರು ಬರೆದಿದ್ದಾರೆ. ಒಟ್ಟಿನಲ್ಲಿ ಹೇಳಬೇಕಾದರೆ ಹಂಪಿಯೇತರ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ಶೈಲಿಯ ಸ್ಮಾರಕಗಳಿರುವುದು ಕನಕಗಿರಿ, ಪೆನಗೊಂಡ, ಚಂದ್ರಗಿರಿ ಮುಂತಾದ ಸ್ಥಳಗಳನ್ನು ಹೆಸರಿಸಬಹುದು.

### ೧. ಕನಕಗಿರಿ ಪರಿಸರದ ಬಾವಿ :

ಕನಕಗಿರಿಯಲ್ಲಿ ವೆಂಕಟಪತಿ ಬಾವಿಗೆ ಇದೊಂದು ರೀತಿಯಲ್ಲಿ ಅತ್ಯಂತ ಆಕರ್ಷಕ ಶಿಲ್ಪಕಲಾ ವೈಭವದಿಂದ ಕೂಡಿದೆ. ವಿಜಯನಗರ ಕಾಲದ ಶ್ರೀ ಕೃಷ್ಣದೇವರಾಯನ ಕಾಲದಲ್ಲಿ ಕನಕಗಿರಿಯ ಸ್ಥಳೀಯ ನಾಯಕರು ನಿರ್ಮಿಸಿದ್ದಾರೆ. ಊರಿನ ಉತ್ತರಕ್ಕೆ ಎರಡು ಫರ್ಲಾಂಗಗಳ ದೂರದಲ್ಲಿ ನಿರ್ಮಿತವಾದ

ಸುಂದರವಾದ ಜಲಕ್ರೀಡಾ ಕೇಂದ್ರವಿದು. ಈ ಸ್ನಾನಗೃಹ ನೋಡಿದವರಿಗೆ ಹಂಪಿಯಲ್ಲಿರುವ ಸ್ನಾನಗೃಹ ತೀರ ಸಾಧಾರಣವಾಗಿ ಕಾಣುತ್ತದೆ. ಕೇವಲ ನಯಗೊಳಿಸಿದ ಕಲ್ಲಿನಲ್ಲಿಯೇ ಈ ಕಟ್ಟಡ ತಯಾರಾಗಿದೆ. ನಡುವೆ ಇರುವ ಸುಮಾರು ನಲವತ್ತು ಅಡಿ ಚೌಕವಿರುವ ಬಾವಿಯ ಸುತ್ತ ಮಂಟಪಗಳಿವೆ. ಒಂದು ಬದಿಗೆ ಈ ಮಂಟಪ ಎರಡು ಅಂತಸ್ತುಗಳಾಗಿ ಮೇಲಿನ ಅಂತಸ್ತು ಸುಂದರ ಕಮಾನು, ಕಿಟಕಿ, ಬಾಗಿಲು, ಮಾಳಿಗೆಯಲ್ಲಿ ಕಟ್ಟಿದ ಜಟಿಲವಾದಂಥ ರೇಖಾವಿನ್ಯಾಸಗಳಿಂದಲೂ ಗೊಂಬೆಗಳಿಂದಲೂ, ಮನೋಹರವಾಗಿದೆ. ನಾಯಕರ ರಸಿಕಪ್ರಿಯತೆಗೆ ಇದು ತಕ್ಕ ನಿದರ್ಶನವಾಗಿದೆ.[೨]

## ೨. ಪೆನುಕೊಂಡ

ದಕ್ಷಿಣ ದಿಕ್ಕಿನ ಕೊನೆಯಲ್ಲಿ ಅರಸರ ಎರಡು ರಚನೆಗಳನ್ನು ಕಾಣಬಹುದು. ಒಂದು ಜೋಡಿ ಮಂದಿರ ರಾಮ ಮತ್ತು ಶಿವನಿಗೆ ಸಂಬಂಧಿಸಿದ್ದು ಮತ್ತು ಎರಡನೆಯದಾಗಿ ಕೋಟೆಯ ಗೋಡೆಯ ಮೇಲೆ ನಿರ್ಮಿಸಲ್ಪಟ್ಟ ಕಾವಲುಗೋಪುರ (watch tower) ಅದು ಪಟ್ಟಣದ ವಾಯುವ್ಯಕ್ಕೆ ಇದೆ.[೩]

## ೨.೧ ಗಗನ ಮಹಲ್

ಇದೊಂದು ಮುಖ್ಯ ಕಟ್ಟಡವಾಗಿದ್ದು ಬಹಳಷ್ಟು ಶಿಥಿಲಗೊಂಡಿದೆ ಮತ್ತು ಇದನ್ನು ಅಲ್ಲಲ್ಲಿ ಮೂಲ ಲಕ್ಷಣಕ್ಕೆ ಹೊರತಾಗಿ ಬದಲಾಯಿಸಲಾಗಿದೆ. ಇದು ಒಂದು ಇತ್ತೀಚೆಗೆ ನಿರ್ಮಾಣಗೊಂಡಿದ್ದು ಆವರಣ ಗೋಡೆಯ ಮಧ್ಯ ನಿಂತಿದೆ.

ಈ ಕಟ್ಟಡವು ಎರಡು ಅಂತಸ್ತುಗಳ ಮಂಟಪವನ್ನು ಹೊಂದಿದೆ. ಎರಡೂ ಅಂತಸ್ತುಗಳು ಹಲವಾರು ವಿಭಾಗಗಳಾಗಿವೆ. ಈಶಾನ್ಯದ ಮೂಲೆಯಲ್ಲಿ ಮಂಟಪಕ್ಕೆ ಹೊಂದಿಕೊಂಡಂತೆ ಮೆಟ್ಟಿಲುಗಳಿವೆ ಮತ್ತು ಆಗ್ನೇಯದಲ್ಲಿ ಒಂದೇ ಅಂತಸ್ತಿನ ಸಣ್ಣ ರಚನೆ ಇದೆ. ಕೆಳ ಅಂತಸ್ತಿನ ಮಂಟಪವು ೫-೫ ವಿಭಾಗಗಳನ್ನು ಹೊಂದಿದ್ದು ಅವು ಬೇರೆ ಬೇರೆ ದಿಕ್ಕಿನಲ್ಲಿವೆ. ದೊಡ್ಡ ವಿಭಾಗಗಳಿಗೆ ಎತ್ತರದ ಗೋಡೆಗಳಿವೆ. ಅವುಗಳು ಪಕ್ಕದ ಗೋಡೆಗೆ ಹೊಂದಿಕೊಂಡಂತೆ ಅಥವಾ ಎರಡು ಸ್ವತಂತ್ರವಾಗಿವೆ. ಹಿಂಭಾಗದಲ್ಲಿ (ಪಶ್ಚಿಮದಲ್ಲಿ) ಎರಡು ಕಮಾನುಗಳಿದ್ದು ಅವುಗಳನ್ನು ದಪ್ಪನಾದ ಗೋಡೆಗಳಿಂದ ಮುಚ್ಚಲಾಗಿದೆ. ಆದರೆ ಇದು ಪುರಾತನ ಕಾಲದಲ್ಲಿ (ಇತ್ತೀಚೆಗೆ ಅದನ್ನು ಮುಚ್ಚಲಾಗಿದೆ). ಮುಂಭಾಗದಲ್ಲಿ ಮಧ್ಯದ ಮೂರು ಭಾಗಗಳು ತೆರೆದಿವೆ. ಅವುಗಳಿಗೆ ಮತ್ತು ಸಣ್ಣ ವಿಭಾಗಗಳಿದ್ದು ಅವು ಬಾಲ್ಕನಿಯನ್ನು ಹೊಂದಿವೆ. ಈ ಮೇಲೆ ಬಾಲ್ಕನಿಯಲ್ಲಿ ಕೂಡಲು ವ್ಯವಸ್ಥೆ ಇದೆ. ಮುಂಭಾಗದ ಮೂರು ಮತ್ತು ಪಕ್ಕದ ತೆರವುಗಳನ್ನು ಮುಚ್ಚಲಾಗಿದೆ. ೫-೨ ವಿಭಾಗದ ಕೋಣೆಗೆ ಕೆಳಗಿನಿಂದ ಮೆಟ್ಟಿಲುಗಳಿವೆ. ಈ ಮೇಲಿನ ಬಾಲ್ಕನಿಗಳಲ್ಲಿ ತೆರೆದ ಸ್ಥಳವಿದೆ. ಪಶ್ಚಿಮದ ಭಾಗಗಳಿಂದ ಈ ಮೇಲಿನ ಭಾಗಗಳನ್ನು ಪ್ರತ್ಯೇಕಿಸಲು ಬಾಗಿಲು ಇದೆ. ಹಿಂಭಾಗದ ಮಧ್ಯೆ ಚೌಕಾಕಾರದ ಕೋಣೆಯು ಕಿಟಕಿ ಮತ್ತು ಬಾಗಿಲನ್ನು ಹೊಂದಿದೆ. ಕಿಟಕಿಗಳು ದಕ್ಷಿಣ ಮತ್ತು ಉತ್ತರದಲ್ಲಿವೆ. ಈ ಭಾಗಗಳನ್ನು ಕೇವಲ ಪೂರ್ವದಿಂದ ಮಾತ್ರ ಸೇರಬಹುದು.

ಹಿಂಭಾಗದ (ಪಶ್ಚಿಮ)ಲ್ಲಿಯ ಬಾಗಿಲು ಕೊನೆಯ ವಿಭಾಗದ ತನಕ ಹೋಗುತ್ತದೆ. ಮಧ್ಯದ ವಿಭಾಗ (bay)ದಲ್ಲಿ ಪಶ್ಚಿಮ ಗೋಡೆಗೆ ಹೊಂದಿಕೊಂಡಂತೆ ಅಂತಸ್ತು ಇದೆ. ಆದರೆ ಕೂಡುವ ವ್ಯವಸ್ಥೆ ಇಲ್ಲ (no raised seating) ಇದರ ಉದ್ದ ಹೆಚ್ಚಾಗಿದ್ದು ಅದನ್ನು ಪೂರಕವಾಗಿ ಇನ್ನೊಂದು ವಿಭಾಗವನ್ನು ಮಾಡಲಾಗಿದೆ.

ಈ ಮಂಟಪದ ಹೊರಭಾಗದಲ್ಲಿ ಕಂಬಗಳ ಪಾದ ಮತ್ತು ಮೆಟ್ಟಿಲುಗಳ ಕಲ್ಲುಗಳು ಇವೆ. ಅಲ್ಲೊಂದು ಸ್ಥಳಾಂತರಿಸಿದ ನಂದಿ ಮತ್ತು ಕಿತ್ತು ಹಾಕಲಾದ ಕಂಬ ಇದೆ.

ಎರಡನೆಯ ಅಂತಸ್ತಿನಲ್ಲಿ ೩-೨ ವಿಭಾಗಗಳಿದ್ದು ಅವು ಉತ್ತರ-ದಕ್ಷಿಣದಲ್ಲಿ ಉದ್ದವಾಗಿವೆ. ನಂತರ ಪೂರ್ವದಲ್ಲಿ ಇನ್ನು ಮೂರು ವಿಭಾಗಗಳನ್ನು ಜೋಡಿಸಲಾಗಿದೆ. ಪಶ್ಚಿಮದ ಹಿಂಭಾಗದ ಚೌಕಕಾರದ ವಿಭಾಗವು ಸ್ವಲ್ಪ ಎತ್ತರದಲ್ಲಿದೆ. ಉತ್ತರ ಮತ್ತು ದಕ್ಷಿಣದ ಆಯತಾಕಾರದ ವಿಭಾಗಗಳು ದ್ವಾರ ಮತ್ತು ಕಿಟಕಿಗಳನ್ನು ಹೊಂದಿವೆ.

ಎರಡನೆಯ ಅಂತಸ್ತನ್ನು ಸುತ್ತುವರಿದಂತೆ ಸುತ್ತಲೂ (walk way) ಒಂದು ಎತ್ತರದ ಗೋಡೆಯನ್ನು ಕಟ್ಟಲಾಗಿದೆ. ಆಗ್ನೇಯದಲ್ಲಿ ಈ ಗೋಡೆಯು ಮೆಟ್ಟಿಲುಗಳನ್ನು ಸಂಧಿಸುತ್ತದೆ. ಅಲ್ಲಿ ಮೆಟ್ಟಿಲುಗಳ ಗೋಪುರ (Stair tower) ಇದೆ. ಇದರ ಕೆಳಗೆ ಒಂದು ಕೋಣೆಯಿದ್ದು ಅದರ ಸುತ್ತಲೂ ಮೆಟ್ಟಿಲು ಮೇಲೆರುತ್ತ ಹೋಗಿವೆ. ದಕ್ಷಿಣದ ದ್ವಾರ ಹೊಂದಿದೆ. ವಿಭಾಗವು ಕಾಲು ದಾರಿಯನ್ನು ಹೊಂದಿದ್ದು, ಅದು ಎರಡನೆಯ ಅಂತಸ್ತಿನ ಮಂಟಪವನ್ನು ಸುತ್ತುವರಿದಿದೆ. ಮೆಟ್ಟಿಲು ಗೋಪುರದ ಕೊನೆಗೂ ಒಂದು ಕೋಣೆ ಇದೆ. ಅದು ಗಾತ್ರದಲ್ಲಿ ಸಣ್ಣದಿದೆ (Reduced in size). ಈ ಕೋಣೆಗೆ ಗೋಡೆಯಲ್ಲಿ ಕೂಡಿಸಲಾದ ಕಂಬಗಳು (piers) ಇದ್ದು ನಾಲ್ಕು ದಿಕ್ಕಿನಲ್ಲಿ ತೆರೆದ ಭಾಗಗಳಿವೆ.

ಚೌಕಾಕಾರದ ವಿಭಾಗಕ್ಕೆ ಹೊಂದಿಕೊಂಡಂತೆ ನೈರುತ್ಯದಲ್ಲಿ ಈ ಮಂಟಪಕ್ಕೆ ಒಂಭತ್ತು ವಿಭಾಗಗಳಿವೆ. ಅವುಗಳಲ್ಲಿ ಮಧ್ಯದ್ದು ದೊಡ್ಡದಾಗಿದೆ. ಈ ಕೋಣೆಯ ಕೆಳಗೆ ಹೊಸ (ಈಗಿನ) ಮೆಟ್ಟಿಲುಗಳನ್ನು ಜೋಡಿಸಲಾಗಿದೆ.

**ಹೊರಭಾಗ :**

ಮಂಟಪದ ಮುಖ್ಯ ಭಾಗವು (ಮುಂಭಾಗ) ಪೂರ್ವದಲ್ಲಿ ಮೂರು ಕಮಾನುಗಳುಳ್ಳ ತೆರವುಗಳನ್ನು ಹೊಂದಿದ್ದು ಅವುಗಳನ್ನು ಆಯತಾಕಾರದ ಸಮತಲಗಳಲ್ಲಿ ಜೋಡಿಸಲಾಗಿದೆ. ಮಧ್ಯದ ಕಮಾನಿನ ಮೇಲ್ತುದಿಯಲ್ಲಿ ಚೌಕಾಕಾರದಲ್ಲಿ ಚಿತ್ರಣವಿದೆ. ಕೊನೆಯ ಭಾಗದಲ್ಲಿ ಅಂತಸ್ತುಗಳು ಹೊರಚಾಚಿವೆ ಆದರೆ ಬಹಳಷ್ಟು ನಾಶಗೊಂಡಿದ್ದು ಹೊಸತಾಗಿ ನಿರ್ಮಿಸಲಾಗಿದೆ. ಈ ನಾಲ್ಕನಿಗಳಿಗೆ ಆಸರೆಯನ್ನು ನಾಲ್ಕು ಕಲ್ಲುಗಳಿಂದ ನೀಡಲಾಗಿದೆ. ಈ ತೀರ ಮೇಲ್ಭಾಗದಲ್ಲಿ ಕಮಲದ ದಳಗಳ ಚಿತ್ರಣವಿದೆ. ಕಮಾನಿನ ತೆರವುಗಳು ಸರಳವಾದ ಪಟ್ಟಿಯಿಂದ ಕೂಡಿದ (Plain bands) ಚೌಕಟ್ಟನ್ನು ಹೊಂದಿವೆ. ಆದರೆ ಮೇಲೆ

ಕಡಿಮೆ ಎತ್ತರದ ಗೋಡೆಯಿದ್ದು ಅದರ ಮೇಲೆ ಇಳಿಜಾರಿನ ಛತ್ತನ್ನು ಹಾಕಲಾಗಿದ್ದು ಅದಕ್ಕೂ ಪ್ಲಾಸ್ಟರ್ ಮಾಡಲಾಗಿದೆ. ಅದನ್ನು ಒಡೆದು ಅಲ್ಲಿ ಕಮಾನಿನ ಆಕಾರದ ತೆರವನ್ನು ಬಿಡಲಾಗಿದೆ. ಅದರಲ್ಲಿ ಹಿಂದೆ ಇದ್ದ ಅಲಂಕಾರದ ರಚನೆಗಳನ್ನು ಕಾಣಬಹುದು.

ಗೋಡೆಗಳಲ್ಲಿ ಹೊರಚಾಚಿರುವ ಆಸರೆಗಳ ಕಲ್ಲುಗಳನ್ನು ಬಿಡಲಾಗಿದೆ. ಅವುಗಳ ಮೇಲೆ ಕಲ್ಲಿನ ತೊಲೆಯನ್ನು ಹಾಕಲಾಗಿದ್ದು ಅದು ಛತ್ತನ್ನು ಎತ್ತಿಹಿಡಿದಿದೆ. ಈ ಛತ್ತಿನ (Eave) ಮೇಲೆ ಅಲಂಕಾರ ಪಟ್ಟಿಯನ್ನು ಮಾಡಲಾಗಿದೆ. ಎತ್ತರದ ಗೋಡೆಯಲ್ಲಿ ಕಂಬಗಳ ಮಧ್ಯೆ ಮಂದಿರ ತುದಿಯಂತೆ ಕಮಾನುಗಳ ರಚನೆಯನ್ನು ಮಾಡಲಾಗಿದೆ. ಅದರ ಮೇಲೆ ವೃತ್ತಾಕಾರದ ವಿವಿಧ ಅಲಂಕಾರಗಳನ್ನು ಮಾಡಲಾಗಿದೆ. ಮಧ್ಯ ಭಾಗದ ಗೋಡೆಯಲ್ಲಿ ಹೊಸದಾಗಿ ಸಿಮೆಂಟ್ ಮಾಡಲಾಗಿದ್ದು. ಅದರಲ್ಲಿ ವ್ಯಕ್ತಿಯೊಬ್ಬನ ಚಿತ್ರವಿದೆ.

ಮೂರು ದಿಕ್ಕಿನಲ್ಲಿರುವ ಹೊರ ಗೋಡೆಗಳು ಸಾದಾ ಇವೆ. ಅದರಲ್ಲಿಯೂ ಕಮಾನಿನ ತೆರವುಗಳನ್ನು ಮಾಡಲಾಗಿದೆ. ಈ ಗೋಡೆಗಳ ಮಧ್ಯೆ ಮೇಲಂತಸ್ತುಗಳನ್ನು ತೆರೆಯಲಾಗಿದ್ದು ಅಲ್ಲಲ್ಲಿ ಅದರ ಕೆಲವು ಲಕ್ಷಣಗಳು ಗೋಚರಿಸುತ್ತವೆ.

ಎರಡನೆಯ ಅಂತಸ್ತಿನ ಹೊರಭಾಗವು ಪೂರ್ವದ ಗೋಡೆಯಿಂದ ಸ್ವಲ್ಪ ಭಾಗ ಮುಚ್ಚಲ್ಪಟ್ಟಿದೆ. ಮೂಲ ಮುಂಭಾಗವು ಮೂರು ವಿಶಾಲ ಕಮಾನು ಹೊಂದಿದೆ. ಅವು ಎರಡು ಸಮತಲದಲ್ಲಿ ನಿರ್ಮಾಣಗೊಂಡಿವೆ. ಕಮಾನುಗಳ ಮಧ್ಯದಲ್ಲಿ ಚೌಕಾಕಾರದ ಕಂಬಗಳು ಕೆಳಗೆ ಅಡಿಗಲ್ಲು ಮತ್ತು ಮೇಲೆ ಆಸರೆ ಕಮಾನುಗಳಿವೆ. ಪಶ್ಚಿಮದ ಹಿಂಭಾಗದಲ್ಲಿಒಂದು ಅಷ್ಟಭುಜಾಕೃತಿಯ ಗೋಪುರವನ್ನು ನಿರ್ಮಿಸಲಾಗಿದೆ. ಅದರಲ್ಲಿ ನಾಲ್ಕು ಆರೋಹಣ ಮತ್ತು ಅವರೋಹಣದ ಛತ್ತಿನ (ಛಾವಣಿ) ಕಲ್ಲುಗಳಿವೆ ಅವುಗಳಲ್ಲಿ ಚಿತ್ರಗಳನ್ನು ಬಿಡಿಸಲಾಗಿದೆ. ಅದರ ಮೇಲೆ ಜೋರಲು ಹಾಕಿದಂತೆ ಛತ್ತು ಇದೆ. ಅದರ ಆಸರೆ ಕಲ್ಲುಗಳು ಉಳಿದಿಲ್ಲ.

ಮೆಟ್ಟಿಲು ಗೋಪುರದ ಗೋಡೆಯು ಚೂಪಾಗಿರುವಂತೆ ಮತ್ತು ಮೇಲಂತಸ್ತುಗಳನ್ನು ಹೊಂದಿದೆ. ಗೋಡೆಗಳು ನೆಲದಿಂದ ಅಡಿಪಾಯದ ಮೇಲೆ ಕಟ್ಟಲ್ಪಟ್ಟಿವೆ. ಈಗ ಅಡಿಪಾಯದ ಭಾಗಗಳು ಮಣ್ಣಿನಲ್ಲಿ ಹೂತುಹೋಗಿವೆ. ಪೂರ್ವ ಮತ್ತು ಉತ್ತರ ದಿಕ್ಕಿನಲ್ಲಿ (ಕೆಳಭಾಗದಲ್ಲಿ) ಆಯತಾಕಾರದ ಚೌಕಟ್ಟಿನಲ್ಲಿ ಕಮಾನಿನ ತೆರವುಗಳಿವೆ. ಮೇಲಿನ ಭಾಗಗಳು ಸಾದಾ ಇವೆ. ಕೆಳಭಾಗ ಮತ್ತು ಮೇಲ್ಭಾಗವನ್ನು ಪ್ರತ್ಯೇಕಿಸುವ ಗೋಡೆ ಇದೆ. ಆದರೆ ಮೇಲಿನ ಭಾಗದ ಕಮಾನುಗಳಲ್ಲಿಮತ್ತು ತೆರೆದುಕೊಂಡ ಬಾಲ್ಕನಿಗಳಲ್ಲಿ ಅಲಂಕಾರವಿದೆ. ಈ ಬಾಲ್ಕನಿಗಳ ಕೆಳಗೆ ಆಸರೆ ಕಲ್ಲುಗಳಿವೆ. ಈ ಕಮಾನುಗಳ ಮೇಲೆ ಕೂಡ ಅದೇ ಮಾದರಿಯ ಸಣ್ಣ ತೆರವುಗಳಿವೆ. ಇಟ್ಟಿಗೆ ಮತ್ತು ಪ್ಲಾಸ್ಟರ್ ಪಟ್ಟಿಯಲ್ಲಿ ಗೋಡೆ ಇದೆ. ಆದರೆ ಅದು ಪೂರ್ತಿ ಕಾಣುವುದಿಲ್ಲ. ಅದರಲ್ಲಿ ಎಲೆ ಬಳ್ಳಿಗಳ ಅಲಂಕಾರ ಪಟ್ಟಿಯಿದೆ. ತೀರ ಮೇಲ್ಭಾಗದ

ಬಾಲ್ಕನಿಗಳಲ್ಲಿ ಸ್ವಲ್ಪ ಬದಲಾವಣೆ ಮಾಡಲಾಗಿದ್ದು ಅಲ್ಲಿ ಇಟ್ಟಿಗೆಯಲ್ಲಿ ಗೂಡುಗಳನ್ನು ಮಾಡಲಾಗಿದ್ದು ಅವು ಈಗ ಹಾಳಾಗಿವೆ.

ಗೋಡೆಯ ಮೇಲ್ಭಾಗದಲ್ಲಿ ಆಸರೆಗಾಗಿ ಹೊರಚಾಚಿದ ಕಲ್ಲುಗಳಿದ್ದು ಅದರ ಮೇಲೆ ತೊಲೆಯಿದೆ. ಅದಕ್ಕೆ ಅಷ್ಟಲಾಗಿ ಮತ್ತು ಬೋದಿಗೆ-ತೊಲೆ-ಛಾವಣಿ ಅಷ್ಟ ಜೋಡಿಗಳಿವೆ. ಈ ರಚನೆ ಬಾಲ್ಕನಿಗಿಂತ ಸ್ವಲ್ಪ ಮೇಲೆ ಇದೆ. ನಂತರ ಇಲ್ಲಿ ಗೋಡೆ ಕಟ್ಟಲಾಗಿದೆ. ಅದು ಸಾದಾ ಇದ್ದು ಕೇವಲ ಆಯತಾಕಾರದ ಕಿಂಡಿಗಳನ್ನು ಹೊಂದಿದೆ. ಮೂಲೆಗಳಲ್ಲಿ ವೃತ್ತಾಕಾರದ ಅಲಂಕಾರ ಪಟ್ಟಿಯಿದೆ.

ಅಷ್ಟಭುಜಾಕೃತಿಯ ಗೋಪುರವು ಬಹುತೇಕ ಸುತ್ತಲೂ ಗೋಡೆಯಿಂದ ಮುಚ್ಚಿಹೋಗಿದೆ. ಗೋಪುರ ಆರೋಹಣ ರೀತಿಯ ಮೂರು ಛತ್ತಿನ ಹಂತಗಳನ್ನು ಹೊಂದಿದೆ. ಅದರ ಮೇಲೆ ಅಲಂಕಾರ ಪಟ್ಟಿಯಿಲ್ಲ. ಮಂಟಪದ ಆಗ್ನೇಯದ ಗೋಡೆಗಳ ಕೆಳಭಾಗ ಗೋಚರಿಸುವುದಿಲ್ಲ. ಅಲ್ಲಲ್ಲಿ ಆಸರೆ ಕಲ್ಲುಗಳ ಕುರುಹು ಕಂಡುಬರುತ್ತದೆ. ಮೇಲಿನ ಗೋಡೆಯಲ್ಲಿ ಆಳವಾದ ಪ್ರಾರ್ಥನಾ ಗೂಡುಗಳಿವೆ. ಅವುಗಳ ಮೇಲೆ ಎಲೆ ಬಳ್ಳಿಗಳ ಅಲಂಕಾರದ ಪಟ್ಟಿ ಇದೆ. ದಕ್ಷಿಣದ ಗೋಡೆಯಲ್ಲಿ ಮೂರು ಭಾಗದ ಪ್ರಾರ್ಥನಾ ಗೂಡು ಇದೆ.

**ಒಳಭಾಗ :**

ಈ ಮಂಟಪದ ಎರಡು ಅಂತಸ್ತುಗಳಲ್ಲಿ ಅತಿ ಮುಖ್ಯವಾಗಿ ಗಮನ ಸೆಳೆಯುವ ಅಂಶ ಎಂದರೆ ಒಳಭಾಗದ ಗುಮ್ಮಟಗಳು, ಗೂಡುಗಳು ಅವುಗಳಿಗೆ ಗೋಡೆಯಲ್ಲಿರುವ ಚೌಕಾಕಾರದ ಕಂಬಗಳು ಮತ್ತು ಇತರ ಗೋಡೆಗಳು ಆಸರೆ ನೀಡಿವೆ. ಎರಡು ಸಮತಲದಲ್ಲಿರುವ ಕಮಾನುಗಳು ಮತ್ತು ತೆರವುಗಳು, ಎಲೆಗಳ ಅಲಂಕಾರಗಳನ್ನು ಮೇಲ್ಭಾಗದಲ್ಲಿ ಕಾಣಬಹುದು. ಅಲ್ಲಿ ಎಂಟು ಭಾಗಗಳಿವೆ. ಅವುಗಳ ಮಧ್ಯೆ ಕೋನಾಕೃತಿಯಲ್ಲಿ ಕಮಾನುಗಳನ್ನು ಮಾಡಿ ಗುಮ್ಮಟದ ಬುಡವನ್ನು ನಿರ್ಮಿಸಲಾಗಿದೆ.

ಮೂಲೆಯ ಕೆಳಭಾಗದಲ್ಲಿ ಜೋತುಬಿದ್ದಿರುವ ತ್ರಿಭುಜಾಕೃತಿಯ ರಚನೆಗಳಿವೆ. ಈ ವಿಭಾಗಗಳ ಮೇಲೆ ಅಷ್ಟಭುಜಾಕೃತಿಯ ಗುಮ್ಮಟದ ಬುಡಗಳಿದ್ದು. ಸಾದಾ ಗುಮ್ಮಟಗಳಿವೆ. ನಾಲ್ಕು ವಿಭಾಗಗಳ ಮುಂಭಾಗದಲ್ಲಿ ಗುಮ್ಮಟಾಕಾರದ ಗೂಡುಗಳನ್ನು ಕಮಾನುಗಳ ನಡುವಿನ ಸ್ಥಳದಲ್ಲಿ ಬಿಡಲಾಗಿದೆ. ಎಂಟು ವಿಭಾಗಗಳಲ್ಲಿ ಆಯತಾಕಾರದ ಸಮತಲದಲ್ಲಿ ಕೇಂದ್ರವುಳ್ಳ ಗೂಡುಗಳನ್ನು ರಚಿಸಲಾಗಿದೆ. ಅವುಗಳಲ್ಲಿಯೂ ಮುಖ್ಯವಾಗಿ ವಿಭಾಗಗಳಲ್ಲಿವೆ. ಗೂಡುಗಳು ಅಷ್ಟಭುಜಾಕೃತಿಯ ಗುಮ್ಮಟದ ಬುಡವು ಎಂಟು ಪರಸ್ಪರ ಛೇದಿಸುವ ಕಮಾನುಗಳ ಮೇಲೆ ಇದೆ ಅದರ ಮಧ್ಯೆ ಜೋತು ಬಿದ್ದಿರುವ ಕೋನಾಕೃತಿಗಳು ಗುಮ್ಮಟದ ಬುಡದ ಮಧ್ಯದಲ್ಲಿ ಹಲವಾರು ಕಡೆ ಚಿತ್ರಗಳನ್ನು ಕಾಣಬಹುದು.

ಈ ಮಂಟಪದ ಎರಡನೆಯ ಅಂತಸ್ತಿನ ಕಮಾನುಗಳ ನಡುವಿನ ಕಂಬಗಳು ಗಿಡ್ಡವಾಗಿ ಮತ್ತು ಅಗಲವಾಗಿವೆ. ಅದಕ್ಕೆ ಹೊಸದಾಗಿ ಆಸರೆಯನ್ನು ಜೋಡಿಸಲಾಗಿದೆ. ಉತ್ತರ ಮತ್ತು ದಕ್ಷಿಣ ಭಾಗಗಳ

ಮೇಲೆ ಗುಮ್ಮಟಗಳಿವೆ. ಹಿಂಭಾಗದ (ಪಶ್ಚಿಮದ) ಭಾಗವು ದೊಡ್ಡದಾಗಿದ್ದು ಅದರ ಅಷ್ಟಭುಜಾಕೃತಿಯ ಬುಡದ ಮೇಲೆ ಗುಮ್ಮಟವಿದೆ. ಮೂಲೆಗಳಲ್ಲಿ ಗೋಡೆಗಳಲ್ಲಿ ಕೂಡಿಸಿರುವ ಕಂಬಗಳು ಅವುಗಳ ಮೇಲೆ ಆಸರೆ ಕಲ್ಲುಗಳು ಮತ್ತು ಸಣ್ಣ ಕಿಟಕಿಗಳನ್ನು ಕೂಡಿಸಲಾಗಿದೆ. ವಾಯವ್ಯ ಮತ್ತು ನೈರುತ್ಯ ಮೂಲೆಗಳ ಗೋಡೆಯಲ್ಲಿ ಕಮಾನುಗಳನ್ನು ಮತ್ತು ಆಯತಾಕಾರಾದ ಎರಡು ಗೂಡುಗಳಿವೆ. ಈ ವಿಭಾಗದ ಕೊನೆಯ ಗೂಡೆಗಳಲ್ಲಿ ಕಮಾನಿನ ರಚನೆಗಳಿವೆ. ಉಳಿದ ಗೋಡೆಗಳು ಸಾದಾ ಇವೆ.

ಮೆಟ್ಟಿಲು ಗೋಪುರದ ಒಳಭಾಗದ ಕೋಣೆಗಳು ವಿವಿಧ ಹಂತಹ ಛತ್ತುಗಳನ್ನು ಮತ್ತು ಅವುಗಳ ಮೇಲೆ ಅಷ್ಟಭುಜಾಕೃತಿಯ ಗುಮ್ಮಟ ಅಥವಾ ಗೂಡು, ಚಪ್ಪಟೆಯಾಕಾರದ ಗುಮ್ಮಟಗಳಿವೆ. ಗೋಡೆಯ ವಿಭಾಗಗಳಲ್ಲಿ ಒಂಭತ್ತು ಚೌಕಾಕಾರದ ಮತ್ತು ಗೋಪುರ ಆಕೃತಿಯ ಗೂಡುಗಳಿವೆ. ಆಗ್ನೇಯದ ಕಮಾನುಗಳ ಮಧ್ಯದ ಕಂಬಗಳು ಒಳಭಾಗದ ರಚನೆಗಳಂತೆ ಇವೆ. ಮಧ್ಯ ಭಾಗದ ಮೇಲೆ ತೊಲೆಯನ್ನು ಒಂಭತ್ತು ಭಾಗಗಳಲ್ಲಿ ಜೋಡಿಸಲಾಗಿದೆ. ಅದು ಕಮಲದ ರಚನೆಯನ್ನು ಹೋಲುತ್ತದೆ.[೪]

## ೨.೨ ಚೌಕಾಕಾರದ ಮಂಟಪ

ಗಗನ ಮಹಲ್‌ನಿಂದ ಸ್ವಲ್ಪ ದೂರದ ಪೂರ್ವದ ದಿಕ್ಕಿನಲ್ಲಿ ಈ ಮಂಟಪ ಇದೆ. ಗಗನ ಮಹಲನ್ನು ಗಮನಿಸಿದರೆ ಇದು ಉತ್ತಮವಾಗಿ ಸಂರಕ್ಷಿಸಲ್ಪಟ್ಟಿದೆ.

ಈ ಚೌಕಾಕಾರದ ಮಂಟಪವು ಒಂದೇ ಗುಮ್ಮಟವನ್ನು ಹೊಂದಿದ. ಕೋಣೆಯಿದ್ದು. ಅದು ನಾಲ್ಕು ದಿಕ್ಕಿನಲ್ಲಿ ತೆರೆದುಕೊಂಡಿದೆ. ಪಶ್ಚಿಮದ ತೆರವು ಈಗ ದ್ವಾರ ಬಾಗಿಲಿನಂತೆ ಉಪಯೋಗಿಸಲ್ಪಡುತ್ತಿದೆ. ನಿಜವಾದ ಬಾಗಿಲು ಬಹುಶಃ ದಕ್ಷಿಣಕ್ಕಿರಬಹುದು.

## ಮೇಲ್ಮೈ ಲಕ್ಷಣಗಳು

ಹೊರಭಾಗದ ಗೋಡೆಯು ಇನ್ನು ಹಳೆಯ ಗಿಲಾವು ಅಥವಾ ಪ್ಲಾಸ್ಟರನ್ನು ಉಳಿಸಿಕೊಂಡಿದೆ. ಗೋಡೆಗಳು ಯಾವುದೇ ಅಲಂಕಾರವನ್ನು ಹೊಂದಿಲ್ಲ ಪ್ರತಿ ದಿಕ್ಕಿನ ಗೋಡೆಯ ಮಧ್ಯದಲ್ಲಿ ಆಳವಾಗಿ ಮುಂಚಾಚಿರುವ ಭಾಗಗಳಿವೆ. ಎರಡು ಸಮತಲದಲ್ಲಿರುವ ಕಮಾನಿನ ಬಿಡುವು ಇವೆ. ಈ ಮುಂಚಾಚಿರುವ ಭಾಗಗಳ ಮೇಲೆ ನಾಲ್ಕು ಕಲ್ಲುಗಳ ಆಸರೆ ಇದೆ. ಅವು ಕೆಳಗೆ ಬಾಗಿಕೊಂಡಿವೆ. ಅವುಗಳ ಮೇಲೆ ಸಣ್ಣ ಎತ್ತರದ ಕಲ್ಲುಗಳಿದ್ದು ಅವುಗಳ ಮೇಲೆ ಆಸರೆ ಕಲ್ಲುಗಳು ಕೆಳಗಿನಂತೆ ಇವೆ. ಮೂಲೆಗಳ ಆಸರೆ ಕಲ್ಲುಗಳ ಜೊತೆಗೆ ಇನ್ನು ಎರಡು ಆಸರೆಗಳು ಇದೆ. ಅವುಗಳ ಮೇಲೆ ಕಲ್ಲಿನ ತೊಲೆಯನ್ನು ಇಡಲಾಗಿದೆ. ಅದು ಅಡ್ಡಲಾಗಿ ಹಾಕಿರುವ ಜಂತಿಗಳನ್ನು ಹಾಕಲಾಗಿದೆ. ಅವುಗಳ ಮೇಲೆ ಇಳಿಜಾರಿನ ಛತ್ತನ್ನು ಹಾಕಲಾಗಿದೆ. ಈ ಛತ್ತನ್ನು ಇಡೀ ಕಟ್ಟಡವನ್ನು ಆವರಿಸಿದೆ. ಅದರ ಮೇಲೆ ಉತ್ತರದ ಗೋಡೆ ಇದೆ. ಅದನ್ನು ಇಟ್ಟಿಗೆಯಿಂದ ನಿರ್ಮಾಣ ಮಾಡಲಾಗಿದೆ. ಆದರೆ ಅದು ಪೂರ್ಣ ಉಳಿದಿಲ್ಲ. ಈ ಗೋಡೆಯ ಕೆಳಭಾಗದಲ್ಲಿ ಚೌಕಾಕಾರದ ಮೆಟ್ಟಿಲುಗಳ ರಚನೆ ಇದೆ. ಮೇಲೆ ಸುರಳಿ ಚಿತ್ರಗಳಿವೆ (ಇವು ಉತ್ತರ ಮತ್ತು ದಕ್ಷಿಣದಲ್ಲಿ ಉತ್ತಮವಾಗಿ ಗೋಚರಿಸುತ್ತವೆ). ಅಲ್ಲಿ ಅಲಂಕಾರ ಪಟ್ಟಿಯೂ ಇದೆ.

ಈ ಮಂಟಪದ ಮೇಲ್ಭಾಗದಲ್ಲಿ ಅಷ್ಟಭುಜಾಕೃತಿಯ ಮೂರು ಕಂಬಗಳ ತೆರವುಗಳ ಮೇಲೆ ಗೋಪುರ ಇದೆ. ಅದರ ಮೇಲೆಲ್ಲಾ ಅಲಂಕಾರ ಮಾಡಲಾಗಿದೆ. ಗುಮ್ಮಟ (ಗೋಪುರ)ದ ಕೆಳಗೆ ಗುಮ್ಮಟದ ಬುಡ ಇದೆ.

**ಒಳಭಾಗ :**

ಒಳಭಾಗದ ಗಿಲಾವ (ಪ್ಲಾಸ್ಟರ್) ಗುಮ್ಮಟದ ಭಾಗದಲ್ಲಿ ಅಸಮಾನ್ಯ ರೀತಿಯಲ್ಲಿ ಉಳಿದುಕೊಂಡಿದೆ. ಎಂಟು ಪರಸ್ಪರ ಛೇದಿಸುವ ಕಮಾನುಗಳಿವೆ. ಕಮಾನುಗಳ ಮಧ್ಯೆ ಕಂಬಗಳಿವೆ, ಮೂಲೆಗಳಲ್ಲಿ ಚಿತ್ರಗಳು, ಎಲೆ, ಬಳ್ಳಿಗಳ ರಚನೆ, ಎತ್ತರದಲ್ಲಿ ಚೌಕಾಕಾರದ ಚಿತ್ರಗಳಿವೆ. ಗುಮ್ಮಟದ ಬುಡಭಾಗದಲ್ಲಿಯೇ ಅನೇಕ ಚಿತ್ರಗಳಿವೆ. ಆಸರೆಗಾಗಿ ಹೊರಚಾಚಿದ ಕಲ್ಲುಗಳ ತುದಿಯಲ್ಲಿ ಸಿಂಹದ ಮುಖದ ಚಿತ್ರ (ಕೆತ್ತನೆ) ಇದೆ.

**೨.೩ ಆಯತಾಕಾರದ ಕಾವಲು ಗೋಪುರ**

ಇದು ಎತ್ತರದ ಹೆಬ್ಬಂಡೆಯ ಮೇಲೆ ಕೋಟೆಯ ಆವರಣದ ವಾಯವ್ಯ ದಿಕ್ಕಿನಲ್ಲಿದೆ. ಈ ಕಾವಲು ಗೋಪುರವನ್ನು ಅಸಮರ್ಪಕವಾಗಿ ಸಂರಕ್ಷಿಸಲ್ಪಟ್ಟಿದೆ. ದಕ್ಷಿಣದಲ್ಲಿ ಅದು ಕುಸಿದಿದೆ. ಅದರ ಹೊರಭಾಗದ ಗಿಲಾವನ್ನು (ಪ್ಲಾಸ್ಟರನ್ನು) ಪುನರ್ ಮಾಡಲಾಗಿದೆ.

ಈ ಕಾವಲು ಗೋಪುರದ ಕೇಂದ್ರದಲ್ಲಿ ಸುರಳಿಯಾಕಾರದ ಮೆಟ್ಟಿಲುಗಳು ಮೇಲಿನ ಅಂತಸ್ತಿಗೆ ಕೊಂಡೊಯ್ಯುತ್ತವೆ. ಈ ಗೋಪುರದ ಬಾಗಿಲು ದಕ್ಷಿಣದಲ್ಲಿದೆ. ಈ ಕಾವಲು ಗೋಪುರದ ಸುತ್ತಲು ಕಾಲುದಾರಿ ಇದೆ. (passage way) ಈ ಆವರಣದ ಒಳಗೋಡೆಗಳು ಅರ್ಧ ವೃತ್ತಾಕಾರದ ತೆರವು ಹೊಂದಿವೆ. ಆಯತಾಕಾರದ ಬಾಲ್ಕನಿಗಳು ಮೂರು ಕಮಾನಿನ ತೆರವುಗಳನ್ನು ಹೊಂದಿದೆ. ಎರಡನೆಯ ಅಂತಸ್ತು ಅಷ್ಟಭುಜಾಕೃತಿಯಲ್ಲಿದ್ದು ನಾಲ್ಕು ತೆರವುಗಳನ್ನು ಹೊಂದಿದೆ. ಹೊಸದಾಗಿ ನಿರ್ಮಿಸಿದ ಮೆಟ್ಟಿಲುಗಳು ದಕ್ಷಿಣದಲ್ಲಿವೆ.

**ಹೊರಭಾಗ :**

ಕಂಬಗಳನ್ನು ಮತ್ತು ಅಷ್ಟಭುಜಾಕೃತಿ ಇರುವ ಗೋಡೆಗಳನ್ನು ಹೊರತುಪಡಿಸಿ ಸಾದಾ ಇವೆ. ಈ ಗೋಡೆಯಲ್ಲಿರುವ ಕಂಬಗಳು, ಆಮಲಕಾ ಎಲೆಯ ಚಿತ್ರಗಳನ್ನು ಮತ್ತು ಆಸರೆಗಾಗಿ ಹೊರಚಾಚಿರುವ ಕಲ್ಲುಗಳನ್ನು ಹೊಂದಿದೆ. ಕೇಂದ್ರದಲ್ಲಿರುವ ವೃತ್ತಾಕಾರದ ಛತ್ತಿನ ಮೇಲೆ ಗೋಪುರ ನಿಂತಿದೆ. ಅಲ್ಲಲ್ಲಿ ಇಳಿಜಾರಿನ ಛಾವಣಿಯ ಮುಂಭಾಗದಲ್ಲಿ ಅಲಂಕಾರಗಳನ್ನು ಮಾಡಲಾಗಿದೆ.

**ಒಳಭಾಗ :**

ಆವರಣ ಕಾಲುದಾರಿ (passage way) ಮೇಲೆ ಸಾಪಾದ ಛತ್ತು ಇದೆ. ಇದರಲ್ಲಿ ಗಮನ ಸೆಳೆಯುವ ಅಂಶವೆಂದರೆ ಕಮಾನುಗಳುಳ್ಳ ತೆರವುಗಳು ಹೊರಭಾಗದಲ್ಲಿ ಚಾಚಿಕೊಂಡಿರುವುದು. ಅಲ್ಲಲ್ಲಿ

ಮಾಡಲಾದ ಚೌಕಾಕಾರದ ಕಿಂಡಿಗಳು ಕಟ್ಟಿಗೆಯ ಆಸರೆಯನ್ನು ಸೂಚಿಸುತ್ತಿರುವುದು. ಆದರೆ ಈಗ ಅವು ಕಾಣೆಯಾಗಿವೆ.

### ೩. ಚಂದ್ರಗಿರಿ

ಆಂಧ್ರ ಮತ್ತು ತಮಿಳುನಾಡು ಗಡಿಭಾಗದಲ್ಲಿದೆ. ಚಂದ್ರಗಿರಿಯಲ್ಲಿರುವ ಎರಡು ಪ್ರಮುಖ ಸ್ಮಾರಕಗಳೆಂದರೆ ಗುಡ್ಡದ ಬದಿಯಲ್ಲಿರುವ ಉತ್ತರಕ್ಕೆ ಮುಖ ಮಾಡಿರುವ 'ರಾಜಮಹಲ' ಮತ್ತು ಅದಕ್ಕೆ ಸ್ವಲ್ಪ ದೂರದಲ್ಲಿರುವ ಈಶಾನ್ಯದಲ್ಲಿರುವ ರಾಣಾಮಹಲ (Rana mahal) ಅದು ಪೂರ್ವಕ್ಕೆ ಮುಖ ಮಾಡಿದೆ. ಇಲ್ಲಿ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಅಂಶಗಳನ್ನು ಮೈಗೂಡಿಸಿಕೊಳ್ಳಲಾಗಿದೆ.'

### ೩.೧ ರಾಜಮಹಲ

ಆಯತಾಕಾರದ ೧೩-೩ ಭಾಗದಲ್ಲಿ ಪೂರ್ವ-ಪಶ್ಚಿಮದ ದಿಕ್ಕಿನಲ್ಲಿವೆ. ಕೆಳ ಅಂತಸ್ತಿನಲ್ಲಿ ೧೩ ವಿಭಾಗಗಳು (bay) ಉತ್ತರಕ್ಕೆ ಮುಖ ಮಾಡಿವೆ. ಕೊನೆಯ ಎರಡು (ಇಕ್ಕೆಲಗಳಲ್ಲಿ) ಎರಡು ವಿಭಾಗಗಳು ಎತ್ತರಕ್ಕಿದ್ದು ಮೆಟ್ಟಿಲುಗಳಿವೆ.

ದಕ್ಷಿಣದಲ್ಲಿ (ಹಿಂಭಾಗ) ವಿಶಾಲವಾದ ಕೋಣೆಯಿದ್ದು ಅದರ ದ್ವಾರ ಉತ್ತರದಲ್ಲಿದೆ. ಇಲ್ಲಿ ಮೂರು ದಿಕ್ಕಿನಲ್ಲಿ ಎತ್ತರದ ಜಗುಲಿ ಇದೆ. (Raised floor) ಅಲ್ಲಿ ಚೌಕಾಕಾರದ ಸ್ತಂಭ (piers)ಗಳು ಈ ಜಗುಲಿಯ ಮೇಲಿದ್ದು ಅವು ವಿಶಾಲ ಹಜಾರವನ್ನು ಅನೇಕ ಸಣ್ಣ ವಿಭಾಗಗಳಾಗಿ ವಿಂಗಿಡಿಸುತ್ತವೆ. ದಕ್ಷಿಣದಲ್ಲಿಕಿಟಕಿಗಳಿದ್ದು ಅವು ಹೊರ ಭಾಗಕ್ಕೆ ಚಾಚಿಕೊಂಡಿವೆ.

ಈ ಮಧ್ಯದ ಕೋಣೆಯ ಪಾರ್ಶ್ವದಲ್ಲಿ (ಪೂರ್ವ-ಪಶ್ಚಿಮದಲ್ಲಿ) ಮೂರು ವಿಭಾಗದ ಕೋಣೆಗಳಿದ್ದು ಉತ್ತರಕ್ಕೆ ದ್ವಾರ ಹೊಂದಿವೆ. ಮಧ್ಯ ಭಾಗದ ಪೂರ್ವ ಮತ್ತು ಪಶ್ಚಿಮದ ಕೊನೆಯ ಭಾಗದಲ್ಲಿ ಮೆಟ್ಟಿಲುಗಳಿದ್ದು ಅವು ಎರಡನೆಯ ಅಂತಸ್ತಿಗೆ ಸಂಪರ್ಕ ಕಲ್ಪಿಸುತ್ತವೆ. ನೈರುತ್ಯ ಮತ್ತು ಆಗ್ನೇಯದ ವಿಭಾಗಗಳು ಸ್ವಲ್ಪ ಹೊರಗಡೆ ಚಾಚಿಕೊಂಡಿವೆ. ಈ ವಿಭಾಗಗಳು ಸಣ್ಣ ಸಣ್ಣ ಕೋಣೆಗಳಾಗಿ ವಿಭಾಗಗೊಂಡಿವೆ.

ಎರಡನೆಯ ಅಂತಸ್ತು ಮೊದಲನೆಯ ಅಂತಸ್ತಿನ ಎಲ್ಲಾ ಲಕ್ಷಣಗಳನ್ನು ಪುನರಾವರ್ತಿಸುತ್ತದೆ. ಇಲ್ಲಿಯೂ ಕೊನೆಯ ವಿಭಾಗಗಳ (bay)ಲ್ಲಿ ಬಾಲ್ಕನಿಯನ್ನು ಬಿಡಲಾಗಿದೆ. ಅದರಂತೆ ಎತ್ತರದ ವಿಭಾಗಗಳಲ್ಲಿಯೂ ಸಹ ಮೇಲಂತಸ್ತುಗಳು ಆಗ್ನೇಯ ಮತ್ತು ನೈರುತ್ಯದ ಕೋಣೆಗಳವರೆಗೆ ಚಾಚಿಕೊಂಡಿದೆ. ಉತ್ತರದ ವಿಭಾಗದ ಮಧ್ಯದಲ್ಲಿ ಮತ್ತೊಂದು ಬಾಲ್ಕನಿಯನ್ನು ನಿರ್ಮಿಸಲಾಗಿದೆ. ಕಟ್ಟಡದ ದಕ್ಷಿಣದಿಂದ ಒಂದು ಕಾಲುದಾರಿ (walk way) ಇದೆ. ಅದು ಕೇಂದ್ರದಲ್ಲಿರುವ ಕೋಣೆಯನ್ನು ಮತ್ತು ದಕ್ಷಿಣದ ಇತರ ವಿಭಾಗಗಳನ್ನು ಸಂಪರ್ಕಿಸುತ್ತದೆ. (ಅಲ್ಲಲ್ಲಿ) ಈ ದಾರಿಯ ಮಧ್ಯದಲ್ಲಿ ಅಷ್ಟಭುಜಾಕೃತಿಯಲ್ಲಿ ಹೊರಚಾಚಿಕೊಂಡ ವಿಭಾಗಗಳಿವೆ.

ಕೇಂದ್ರದ ಕೋಣೆಯ ನೆಲಹಾಸು (ಜಗುಲಿ) ಎತ್ತರಕ್ಕಿದ್ದು ದಕ್ಷಿಣ ಮತ್ತು ಪಶ್ಚಿಮದಲ್ಲಿ ದ್ವಾರಗಳಿವೆ. ಪೂರ್ವದಲ್ಲಿ ಇದ್ದ ದ್ವಾರವನ್ನು ಮುಚ್ಚಲಾಗಿದೆ. ಈ ಕೋಣೆಯು ಎತ್ತರದಲ್ಲಿ ಎರಡು ಅಂತಸ್ತಿನಷ್ಟಿದೆ. ಮೂರನೆಯ ಅಂತಸ್ತಿನ (ಕಾರಿಡಾರನ) ತನಕ ಇದೆ. ಇಲ್ಲಿನ ಮೂರು ದಿಕ್ಕಿನಲ್ಲಿರುವ ಕಮಾನುಗಳು ಸಣ್ಣ ವಿಭಾಗಗಳಿದ್ದು, ತೆರೆದುಕೊಳ್ಳುತ್ತವೆ. ದಕ್ಷಿಣದಲ್ಲಿ ಮೂರು ಮಧ್ಯಭಾಗದ ವಿಭಾಗಗಳು ಮತ್ತು ಎರಡು ಪಕ್ಕದಲ್ಲಿರುವ ವಿಭಾಗಗಳು ಪ್ರತ್ಯೇಕವಾಗಿ ಹೊರಚಾಚುವ ಬಾಲ್ಕನಿಯನ್ನು ಹೊಂದಿವೆ. ನೈರುತ್ಯ ಮತ್ತು ಆಗ್ನೇಯಕ್ಕೆ ಇರುವ ದ್ವಾರಗಳು ಕಾಲುದಾರಿಗೆ ತೆರೆದುಕೊಳ್ಳುತ್ತವೆ.

ಮೂರನೆಯ ಅಂತಸ್ತನಲ್ಲಿ ಯೋಜನೆಯನ್ನು ಬದಲಾಯಿಸಲಾಗಿದೆ. ಅಲ್ಲಿ ತೆರೆದ ಸ್ಥಳವಿದೆ. ಎರಡು ಉತ್ತರದ ಮೂಲೆಗಳಲ್ಲಿ ಒಂದೇ ಒಂದು ಭಾಗ (bay) ಉಳಿದುಕೊಂಡಿದೆ. ಮಧ್ಯದ ಕೋಣೆಯು ಕೇವಲ ಕಾಲುದಾರಿಯನ್ನು ಹೊಂದಿದೆ. ಅಲ್ಲಲ್ಲಿ ಹೊಸ (ಇಂದಿನ) ಕಿಟಕಿಗಳನ್ನು ಸೇರಿಸಲಾಗಿದೆ. ಕಟ್ಟಡದ ದಕ್ಷಿಣದಲ್ಲಿರುವ ಕಾಲುದಾರಿಗೆ (ಕಾರಿಡಾರು) ತೆರೆದುಕೊಳ್ಳುತ್ತದೆ.

ಮೂರನೆಯ ಅಂತಸ್ತಿನ ಛಾವಣಿ (roof) ಬಹುತೇಕ ಖಾಲಿ ಇದ್ದು ಕೇಂದ್ರದ ಕೋಣೆಯ ಮೇಲೆ ಗುಮ್ಮಟವಿದೆ. ಮೂರು ವಿಭಾಗಗಳ ಎರಡು ಸಣ್ಣ ಕೋಣೆಗಳು ಪೂರ್ವ ಮತ್ತು ಪಶ್ಚಿಮಕ್ಕೆ ಇವೆ.[೭]

**ಹೊರಭಾಗ :**

ಉತ್ತರದ ಮುಂಭಾಗದ ಮೇಲ್ಮೈ (Elevation) ಬಹಳಷ್ಟು ಹೊಸದಾಗಿ ನಿರ್ಮಿಸಲಾಗಿದೆ. ಹಳೆಯ ಗಿಲಾವು (ಪ್ಲಾಸ್ಟರ್) ಎಲ್ಲಿಯೂ ಉಳಿದಿಲ್ಲ ಅಡಿಪಾಯದ ಒಂದು ಸಾದಾ ಕಲ್ಲು ಉಳಿದಿದೆ. ಮೆಟ್ಟಿಲುಗಳು ಮೊದಲನೆಯ ಅಂತಸ್ತಿಗೆ ಕೊಂಡೊಯ್ಯುತ್ತವೆ. ಅಲ್ಲಿ ಹದಿಮೂರು ಕಮಾನುಗಳ ತೆರವುಗಳು ಎರಡು ಹಂತದಲ್ಲಿವೆ. ಮೊದಲನೆ ಅಂತಸ್ತು (Ground level) ಹನ್ನೊಂದು ಕಮಾನುಗಳನ್ನು ಹೊಂದಿದೆ. ಅವು ಎರಡು ಸಮತಲಗಳಲ್ಲಿ ಆಯತಾಕಾರದ ಚೌಕಟ್ಟಿನಲ್ಲಿವೆ. ಅವು ಕಮಾನುಗಳ ಮಧ್ಯೆದ ಕಂಬ (piers)ಗಳಿಂದ ಎದ್ದಿವೆ. ಮಧ್ಯೆದಲ್ಲಿ ಆಸರೆ ಕಲ್ಲುಗಳಿಗೆ (brackets) ಅಲಂಕಾರದ ಕೆತ್ತನೆ ಇದೆ. ಪ್ರತಿ ಬಾಲ್ಕನಿಗೆ ನಾಲ್ಕು ಹೊರಚಾಚಿದ ಕಲ್ಲುಗಳ ಆಸರೆ ಇದೆ.

**ಒಳಭಾಗ :**

ಒಳಭಾಗದ ಮೊದಲನೆಯ ಅಂತಸ್ತಿನಲ್ಲಿ ಒಂದೇ ತೆರನಾದ ಚೌಕಾಕಾರದ ಕಂಬಗಳಿದ್ದು ಅವುಗಳ ಮೇಲೆ ಹೊರಚಾಚಿದ ಭಾಗಗಳ ಕಮಾನುಗಳಿವೆ. ಗೋಡೆಗಳು ಮತ್ತು ದ್ವಾರಗಳು ಸಾದಾ ಇವೆ. ಕೂಡುವ ಸ್ಥಳದ ಮೇಲೆಯಿಂದ ಕಿಟಕಿಗಳು ಎದ್ದಿವೆ. ಅವುಗಳಿಗೆ ಗಿಲಾವ (ಪ್ಲಾಸ್ಟರ್) ಮಾಡಿದ ಆಸರೆಗಳಿವೆ. ವಿಶಾಲವಾದ ಮಧ್ಯೆದ ಕೋಣೆಯಲ್ಲಿ ಖಾಲಿ ಆಸರೆಗಳಿವೆ. (Empty brackets) ಅವುಗಳ ಮೇಲೆ ಶಿಲ್ಪಗಳನ್ನು ಇಟ್ಟಿರಬಹುದೆಂದು ಗೋಚರವಾಗುತ್ತದೆ. ಕಮಾನುಗಳ ಮಧ್ಯೆ ಕಂಬಗಳಿವೆ. ಛತ್ತಿನಲ್ಲಿ ಸಾಪಾಟಾದ ಗುಮ್ಮಟವಿದೆ. ಮಧ್ಯದಲ್ಲಿ ಎರಡು ಲೋಹಗಳ ಕೊಂಡಿ (Mental hook)ಗಳಿವೆ. ಉಳಿದ

ವಿಭಾಗಗಳ ಎಲ್ಲಾ ಗುಮ್ಮಟಗಳು ಸಹ ಸಾಪಾಗಿವೆ. ಇಲ್ಲಿ ಮಾತ್ರ ಮೂಲ (ಗಿಲಾವ) ಪ್ಲಾಸ್ಟರನ ಅಲಂಕಾರ ಉಳಿದಿವೆ. ಛತ್ತಿಗಳು ಸಣ್ಣ ತೊಲೆಗಳಿಗಿಂತ (miniataure beanlike) ಒಂಭತ್ತು ವಿಭಾಗಗಳಿದ್ದು ಅವುಗಳ ಮೇಲೆ ಕಮಲದ ಚಿತ್ತಾರವಿದೆ. ಪಕ್ಕದ ಅಂಚಿನಲ್ಲಿ ಬೇರೆ ಬೇರೆ ಅಲಂಕಾರಗಳ ಪಟ್ಟಿ ಇದೆ. ಮೆಟ್ಟಿಲುಗಳ ಛತ್ತಿಗೆ ಎರಡು ಗೂಡು (vaults)ಗಳನ್ನು ಮಾಡಲಾಗಿದೆ.

ಎರಡನೆಯ ಅಂತಸ್ತಿನ ಒಳಭಾಗವು ಕೆಳ ಅಂತಸ್ತನ್ನು ಹೋಲುತ್ತದೆ. ಛತ್ತಿನಲ್ಲಿ ವಿಭಾಗಗೊಂಡ ಕಮಲದ ಚಿತ್ತಾರ, ಎಲೆ, ಬಳ್ಳಿಗಳ ಅಲಂಕಾರವಿಲ್ಲ ಇದೆ ಆದರೆ ಮಧ್ಯದ ಕೋಣೆಯ ಗೋಡೆಗಳ ರಚನೆಯನ್ನು ಬದಲಾಯಿಸಲಾಗಿದೆ. ಛತ್ತು (ಮೂರನೆಯ ಅಂತಸ್ತಿನ ವಿಸ್ತರಿಸಿದೆ) ಸಾಪಾದ ಗುಮ್ಮಟವನ್ನು (Hattin down) ಹೊಂದಿದ್ದು ಅಷ್ಟಭುಜಾಕೃತಿಯ ಯೋಜನೆಯಲ್ಲಿದೆ. ಇದೂ ಕೂಡ ಒಂಭತ್ತು ಭಾಗಗಳಾಗಿದ್ದು ಮಧ್ಯದಲ್ಲಿ ಕಮಲದ ಚಿತ್ತಾರ ಗೋಚರಿಸುತ್ತದೆ.

ಮೂರನೆಯ ಅಂತಸ್ತಿನ ಒಳಭಾಗ ಎತ್ತರಲ್ಲಿ ಕಡಿಮೆ ಇದೆ. ಯಾವುದೇ ಅಲಂಕಾರ, ಚಿತ್ತಾರ ಇಲ್ಲದ ಗೋಡೆಗಳಿವೆ. ಗೋಡೆಗಳಲ್ಲಾದ ಕಂಬಗಳು, ಕೆಲವು ಕಡೆ ಕಮಾನುಗಳ ಮಧ್ಯದ ಕಂಬಕ್ಕೆ ಹೊಂದಿಕೊಂಡಿವೆ. ಛತ್ತಿನಲ್ಲಿ ಒಂಭತ್ತು ಭಾಗಗಳ ಚಿತ್ತಾರದ ಕುರುಹು ಇದೆ.

ನಾಲ್ಕನೆಯ ಅಂತಸ್ತಿನ ಮಧ್ಯದ ಕೋಣೆಯ ಪ್ರವೇಶದ್ವಾರಕ್ಕೆ ಕಮಾನು ಇದೆ. ಅದೇ ತೆರನಾದ ಕಮಾನು ನಾಲ್ಕು ದಿಕ್ಕಿನಲ್ಲಿದೆ. ಅಷ್ಟಭುಜಾಕೃತಿಯ ಗುಮ್ಮಟದ ಬುಡ (drum) ಎರಡು ಹಂತದಲ್ಲಿದ್ದು ಬಹಳಷ್ಟು ಪುನರ್ ನಿರ್ಮಿಸಲಾಗಿದೆ.[೮]

## ೩.೨ ರಾಣಾಮಹಲ್

ಎರಡು ಅಂತಸ್ತಿನ ಈ ಕಟ್ಟಡವು ಪೂರ್ವಾಭಿಮುಖವಾಗಿದ್ದು ಕಲ್ಲಿನ ಅಡಿಪಾಯ ಗೋಡೆಯನ್ನು ಹೊಂದಿದೆ. ಸರಣಿಯಲ್ಲಿರುವ ಮೆಟ್ಟಿಲು ಮತ್ತು ನೆಲಹಾಸು (floor)ಗಳನ್ನು ಗಮನಿಸಿದಾಗ ಒಂದು ಸಂಕೀರ್ಣ ಆವರಣದ ಕಲ್ಪನೆ ಬರುತ್ತದೆ. ಈ ಕಟ್ಟಡವನ್ನು ಬಹಳಷ್ಟು ಪುನರ್ ನಿರ್ಮಿಸಲಾಗಿದ್ದರು ಮುಂಭಾಗದಲ್ಲಿ ಮೂಲ ಅಲಂಕಾರ ಮತ್ತು ಗಿಲಾವು ಉಳಿದುಕೊಂಡಿದೆ.

ಕೆಳ ಅಂತಸ್ತಿನಲ್ಲಿ ಚೌಕಾಕಾರದ ಕೋಣೆ ಇದು ಅದು ಪಶ್ಚಿಮ ಭಾಗದಿಂದ (ಹಿಂಭಾಗ) ಚಾಚಿಕೊಂಡಿದೆ. ಅದು ದಕ್ಷಿಣ ಮತ್ತು ಪೂರ್ವದಲ್ಲಿ ಪ್ರವೇಶದ್ವಾರಗಳನ್ನು ನಿರ್ಮಿಸಿದೆ. ಅಲ್ಲಿ ಎತ್ತರವಾದ ಪ್ರದೇಶ ಇದೆ (Raised area). ಈ ಕೋಣೆಯ ಒಂದು ಅಂಗಣಕ್ಕೆ ಹೊಂದಿಕೊಂಡಿದ್ದು ಅದು ಕೂಡ ಪೂರ್ವದಲ್ಲಿ ತೆರೆದುಕೊಂಡಿದೆ. ಇದರ ಎರಡು ಬದಿಯಲ್ಲಿ ಮೇಲಿನ ಅಂತಸ್ತಿಗೆ ಹೋಗಲು ಮೆಟ್ಟಿಲುಗಳ ವ್ಯವಸ್ಥೆ ಇದೆ (stair case). ಉತ್ತರದ ಮೆಟ್ಟಿಲು ಗೋಪುರಕ್ಕೆ ಎರಡು ಬಾಗಿಲುಗಳಿವೆ. ದಕ್ಷಿಣ ಮತ್ತು ಪೂರ್ವಕ್ಕೆ ದ್ವಾರ ಇರುವಂತೆ ಮೊದಲಿನ ಅಂತಸ್ತಿನ ಸುತ್ತಲೂ ಆವರಣದಲ್ಲಿ ದಾರಿ ಇದೆ.

ಎರಡನೆಯ ಅಂತಸ್ತಿನ ಆರ್ಕೆಡ್ ಸಹ ತೆರೆದುಕೊಂಡಿದೆ. ಇದು ಮಧ್ಯೆದ ವಿಶಾಲ ಕೋಣೆಗಳ ಮತ್ತು ಮೆಟ್ಟಿಲು ಗೋಪುರಕ್ಕೆ ಸಂಪರ್ಕ ಕಲ್ಪಿಸುತ್ತದೆ. ಈ ಕೋಣೆಯ ಮುಂಭಾಗದ ಗೋಡೆಯಲ್ಲಿ ಎತ್ತರವಾದ ಕೂಡುವ ಸ್ಥಳ ಇದೆ. ಮೆಟ್ಟಲು ಗೋಪುರ ದ್ವಾರಗಳು ಪಶ್ಚಿಮದಿಂದ ಸಾಗಿ ಕಾಲುದಾರಿಗೆ ತೆರೆದುಕೊಳ್ಳುತ್ತವೆ. ಅದು ಇಡೀ ಕಟ್ಟಡವನ್ನು ಸುತ್ತುವರಿದಿದೆ.[೯]

ಹಂಪಿಯೇತರ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ಶೈಲಿಯ ಸ್ಮಾರಕಗಳು ಪೆನುಗೊಂಡ, ಚಂದ್ರಗಿರಿ, ಕನಕಗಿರಿ ಇತ್ಯಾದಿ ಪ್ರದೇಶಗಳಲ್ಲಿ ಈ ಶೈಲಿಯ ಸ್ಮಾರಕಗಳು ದೊರೆತಿವೆ. ಒಟ್ಟಿನಲ್ಲಿ ಹೇಳಬೇಕಾದರೆ ಹಂಪಿ ಮತ್ತು ಹಂಪಿಯೇತರ ಪ್ರದೇಶಗಳಲ್ಲಿ ಈ ಶೈಲಿಯ ಸ್ಮಾರಕಗಳು ಕಾಣಸಿಗುತ್ತವೆ.

**ಟಿಪ್ಪಣಿಗಳು :**

೧. ಡಾ.ವಸುಂಧರಾ ಫಿಲಿಯೋಜಾ, **ಅಳಿದುಳಿದ ಹಂಪೆ,** ಪುಟ ೧೧

೨. ಜಯತೀರ್ಥ ರಾಜಪುರೋಹಿತ, **ಕನಕಗಿರಿ ದರ್ಶನ,** ಪುಟ ೨೫

೩. ಜಾರ್ಜ್ ಮಿಶೆಲ್, ವಿಜಯನಗರ **ದಿ ಕೋರ್ಟ್ ಲೀ ಸ್ಟೈಲ್,** (ಇಂಡೋ-ಇಸ್ಲಾಮಿಕ್ ಆರ್ಕಿಟೆಕ್ಚರ್ ಎಟ್ ಪೆನುಗೊಂಡ), ಪುಟ ೩೦

೪. ಅದೇ, ಪುಟ ೩೧

೫. ಅದೇ, ಪುಟ ೩೨

೬. ಅದೇ, ಪುಟ ೩೩

೭. ಅದೇ, ಪುಟ ೩೩

೮. ರಾಜಶೇಖರ ಎಸ್, ೧೯೮೩, **ಮಾಸ್ಟರ್ ಪೀಸ್ ಆಫ್ ವಿಜಯನಗರ,** ಪುಟ ೫೩

೯. ಡಾ.ಸಿ.ಮಹಾದೇವ ಇತರರು, **ಹೊಸಪೇಟೆ ತಾಲೂಕು ದರ್ಶನ,** ಪುಟ ೧೮೫

# ಅಧ್ಯಾಯ ಆರು

## ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪ ಮತ್ತು ಆ ಕಾಲದ ಜನಜೀವನ

ವಿಜಯನಗರ ಪಟ್ಟಣದಲ್ಲಿ ಮುಸ್ಲಿಮರು ನೆಲಿಸಿದ್ದರು[೧] ಹಾಗೂ ವಿಜಯನಗರದ ಸೈನ್ಯದಲ್ಲಿ ಮುಸ್ಲಿಮರು ಅಧಿಕ ಸಂಖ್ಯೆಯಲ್ಲಿದ್ದರು.[೨] ಹಂಪಿಯ ನೀರಿನ ಅರಮನೆಗಳು (ಜಲಮಹಲ್), ಚಿಲುಮೆಗಳು, ಗಜಶಾಲೆ, ಕಾವಲು ಗೋಪುರಗಳು ಹಲವು ಅಂತಸ್ತುಗಳ ಮಂಟಪಗಳು ಹಾಗೂ ಪ್ರವೇಶ ದ್ವಾರಗಳು ಇಂಡೋ-ಇಸ್ಲಾಂ ಶೈಲಿಯಲ್ಲಿವೆ. ಮುಸ್ಲಿಮ್ ವಾಸ್ತುಶಿಲ್ಪಿಗಳು ಹಾಗೂ ಕುಶಲಕರ್ಮಿಗಳಾದಿಯಾಗಿ ಎಲ್ಲಾ ವರ್ಗದ ಮುಸ್ಲಿಮರು ವಿಜಯನಗರದಲ್ಲಿದ್ದರು.[೩] ರಾಜನ ಸೇವೆಯಲ್ಲಿದ್ದ ಮುಸ್ಲಿಂ ಅಧಿಕಾರಿಗಳು ಕೆಲವು ಧಾರ್ಮಿಕ ಕಟ್ಟಡಗಳನ್ನು ನಿರ್ಮಿಸಿದ್ದಾರೆ.

ವಿಜಯನಗರ ಕಾಲಕ್ಕೆ ಅರಮನೆ ಪ್ರದೇಶದ ಈಶಾನ್ಯ ದಿಕ್ಕಿನಲ್ಲಿ ಅಂದರೆ ತಳವಾರಘಟ್ಟಕ್ಕೆ ಹೋಗುವ ರಸ್ತೆಯಲ್ಲಿ ಮುಸ್ಲಿಂ ನೆಲೆಯನ್ನು ಗುರುತಿಸಲಾಗಿದೆ. ಇಲ್ಲಿ ಅಸಂಖ್ಯಾತ ಗೋರಿಗಳು ಕಂಡುಬಂದಿವೆ. ಅಲ್ಲದೆ ಕ್ರಿ.ಶ. ೧೪೩೯ರ ಶಾಸನವೊಂದು ಇಲ್ಲಿನ ಅಹಮದ್‌ಖಾನ್‌ನ ಧರ್ಮಶಾಲೆಯಲ್ಲಿದ್ದು.[೪] ಶ್ರೀ ವೀರ ಪ್ರತಾಪ ದೇವಾರಾಯ ಮಹಾರಾಯರ ಶ್ರೀಪಾದ ಸೇವೆಯ ಕಟ್ಟಿಗೆಯ ಅಹಮದ್ ಖಾನ್‌ನನು ತನ್ನ ದೊರೆಗೆ ಪುಣ್ಯವಾಗಲೆಂದು ಧರ್ಮಶಾಲೆಯನ್ನು ಮತ್ತು ಬಾವಿಯನ್ನು ನಿರ್ಮಿಸಿದ್ದನೆಂದು ತಿಳಿಸುತ್ತದೆ. ಈ ಧರ್ಮಶಾಲೆ ತಳಾರಘಟ್ಟಕ್ಕೆ ಹೋಗುವ ರಸ್ತೆಯಲ್ಲಿದೆ. ಇದರಿಂದ ಆಡಳಿತದಲ್ಲಿ ಅನೇಕ ನಿಷ್ಠಾವಂತ ಮುಸ್ಲಿಮ್ ಅಧಿಕಾರಿಗಳಿದ್ದರೆಂದು ಸ್ಪಷ್ಟವಾಗುವುದು.

ಧರ್ಮಶಾಲೆಯು ಪೂರ್ವಾಭಿಮುಖವಾಗಿದ್ದು ಸರಳವಾದ ಕಂಬಗಳಿರುವ ವಿಶಾಲವಾದ ಪಡಸಾಲೆಯನ್ನು ಹೊಂದಿ ಆಯತಾಕಾರದಲ್ಲಿದೆ. ಶೈಲಿಯಲ್ಲಿ ಸಮಕಾಲೀನ ದೇವಾಲಯ ರಚನೆಯನ್ನು ಹೋಲುತ್ತದೆ. ಅಂದರೆ ಇಸ್ಲಾಮೇತರ ಶೈಲಿಯಲ್ಲಿ ನಿರ್ಮಾಣವಾಗಿದೆ. ಪಶ್ಚಿಮದ ಗೋಡೆಯ ಮಧ್ಯೆ ಭಾಗದಲ್ಲಿ ಕಮಾನು ಒಳಸರಿದಂತಿರುವ ಮಿಹಿರಾಬನ್ನು ಹೊಂದಿರುವುದರಿಂದ ಇದು ಮಸೀದಿ ಎಂದು ಗುರುತಿಸಲಾಗಿದೆ. ತೊಲೆ ಭಾಗದಲ್ಲಿರುವ ಮೇಲ್ಕಂಡ ಶಾಸನದಲ್ಲಿ ಯಾವುದೇ ಪರ್ಶಿಯನ್ ಅಥವಾ ಅರಾಬಿಕ್ ಭಾಷೆಗಳ ಪದವನ್ನು ಬಳಸಿಲ್ಲ.

ಇಲ್ಲಿನ ಮತ್ತೊಂದು ಮಸೀದಿಯು ಧರ್ಮಶಾಲೆಯ ಆಗ್ನೇಯಕ್ಕೆ ಅರ್ಧ ಕಿ.ಮೀ. ದೂರದಲ್ಲಿ ಮಾಲ್ಯವಂತ ಪರ್ವತದ ತಪ್ಪಲಲ್ಲಿದೆ. ಈ ಸ್ಮಾರಕದ ಬಳಿ ಬಾವಿ ಇದ್ದು ಅನೇಕ ಸಮಾಧಿಗಳು ಕಂಡುಬರುತ್ತವೆ. ಈ ಮಸೀದಿಯು ಹಾಳಾಗಿದ್ದು ಪಶ್ಚಿಮದ ಗೋಡೆಯ ಮಧ್ಯೆಭಾಗದಲ್ಲಿ ಹಿಂದೆ ಸರಿದಂತೆ ಆಯತಾಕಾರದ ಮಿಹಿರಾಬನ್ನು ಹೊಂದಿದೆ. ಈ ಮೇಲ್ಕಂಡ ಎರಡು ಮಸೀದಿಗಳ ಮಿಹಿರಾಬ್ ಕೋಷ್ಟವು ಒಂದೇ ತೆರನಾಗಿದ್ದು ಗಮನಾರ್ಹವಾಗಿವೆ. ಧರ್ಮಶಾಲೆಯ ದಕ್ಷಿಣಕ್ಕೆ ಗುಮ್ಮಟವೊಂದು ಕಂಡುಬರುತ್ತದೆ. ಇದು ಚೌಕಾಕಾರದ ತಲವಿನ್ಯಾಸ ಹೊಂದಿದ್ದು, ಕಲ್ಲಿನಲ್ಲಿ ನಿರ್ಮಿಸಲಾಗಿದೆ. ಗೋಡೆಗಳಲ್ಲಿ ಚಿಕ್ಕಗಾತ್ರದ ಕಮಾನಿನ ಕೋಷ್ಟಗಳನ್ನು ಕಾಣಬಹುದು. ಇದರ ಈಶಾನ್ಯಕ್ಕೆ ಸಣ್ಣದಾದ ಗುಮ್ಮಟವಿರುವ ಮತ್ತೊಂದು ಕಟ್ಟಡ ಕಂಡುಬರುತ್ತದೆ. ಈ ಸ್ಮಾರಕಗಳು ಯಾವುದೇ ರೀತಿಯ ಗೋಡೆಗಳಿಂದಾಗಲಿ ಅಥವಾ ದ್ವಾರಗಳಿಂದಾಗಲಿ ಪ್ರತ್ಯೇಕವಾಗಿಲ್ಲ.

ಇದು ಮುಸ್ಲಿಂ ಸಮುದಾಯವು ಕೋಟೆ ಒಳಗಿನ ನಗರ ಪ್ರದೇಶದಲ್ಲಿದ್ದು ಸಾಮಾನ್ಯ ಜನರ ಜೊತೆ ಐಕ್ಯತಾ ಜೀವನವನ್ನು ನಡೆಸುತ್ತಿತ್ತೆಂದು ತಿಳಿಸುತ್ತದೆ. ಕೃಷ್ಣಪುರ, ಅಚ್ಯುತಪುರಗಳು ಸಹ ಮುಸ್ಲಿಂ ಜನರು ವಾಸಿಸುತ್ತಿದ್ದರು. ಪಾಯಸ್ ಸಹ ಬೀದಿಯ ಕೊನೆಯಲ್ಲಿ ಮೂರರ (ಮುಸ್ಲಿಂ) ನೆಲೆ ಇದ್ದು ಅವರು ರಾಜನ ಸೇವೆಯಲ್ಲಿದ್ದರೆಂದು ತನ್ನ ನಗರ ವರ್ಣನೆಯಲ್ಲಿ ತಿಳಿಸಿದ್ದಾರೆ.

ಕಡ್ಡಿರಾಮಪುರದ ನೈರುತ್ಯಕ್ಕೆ ಎರಡು ಪ್ರಮುಖ ಗೋರಿಗಳಿರುವ ಕಟ್ಟಡಗಳು ಕಂಡುಬರುತ್ತವೆ. ಇದು ವಿಜಯನಗರ ಕಾಲದಲ್ಲಿ ನಗರದ ಒಂದು ಭಾಗವಾಗಿತ್ತು. ಸುತ್ತಲೂ ವಿಜಯನಗರ ಕಾಲದ ಗೋರಿಗಳು ಕಂಡುಬರುತ್ತವೆ. ಈ ಪ್ರದೇಶದಲ್ಲಿ ಮುಸ್ಲಿಮರು ವಾಸಿಸುತ್ತಿದ್ದರೆಂದು ಈ ಮೇಲಿನ ರಚನೆಗಳು ತಿಳಿಸುತ್ತವೆ. ಗೋರಿಗಳನ್ನು ಹೊಂದಿರುವ ಎರಡು ಕಟ್ಟಡಗಳಲ್ಲಿ ಒಂದು ಕಟ್ಟಡವು ಗುಮ್ಮಟವನ್ನು ಹೊಂದಿಲ್ಲ. ಇದು ದೊಡ್ಡದಿದ್ದು ವಿಜಯನಗರದ ಅಪೂರ್ಣ ಕಟ್ಟಡವೆಂಬುದಕ್ಕೆ ಒಂದು ಉದಾಹರಣೆಯಾಗಿದೆ. ಪ್ರತಿ ಪಾರ್ಶ್ವದ ಪ್ರವೇಶದ್ವಾರವು ತನ್ನ ಎಡಬಲಗಳಲ್ಲಿ ಕೋಷ್ಟವನ್ನು ಹೊಂದಿದೆ. ಚೌಕಾಕಾರದ ವೇದಿಕೆ ಮೇಲೆ ಊರ್ಧ್ವ ಮುಖವಾಗಿರುವ ಗೋಡೆಗಳನ್ನು ಎರಡು ಅಂತಸ್ತುಗಳಾಗಿ ವಿಭಾಗಿಸಲಾಗಿದೆ. ಕೆಳ ಅಂತಸ್ತಿನಲ್ಲಿ ಮೂರು ಗೋಡೆಯ ಒಳಗೆ ಆಯಾತಾಕಾರದ ಕಮಾನುಗಳ ಚೌಕಟ್ಟನ್ನು ರಚಿಸಲಾಗಿದೆ. ಈ ಕಟ್ಟಡ ಕುರಿತಂತೆ ಯಾವುದೇ ಐತಿಹಾಸಿಕ ದಾಖಲೆಗಳಿಲ್ಲ.

ಮಲಪನಗುಡಿಯಲ್ಲಿರುವ ಅಷ್ಟಕೋನಾಕಾರದ ಬಾವಿಯು ಕ್ರಿ.ಶ ೧೪೧೨ರಲ್ಲಿ ನಿರ್ಮಿತವಾಗಿದ್ದು. ಇದರ ಕೆಲವು ವಾಸ್ತುಲಕ್ಷಣಗಳು ಈ ಗೋರಿ ಕಟ್ಟಡದಲ್ಲಿ ಕಂಡುಬರುತ್ತವೆ.[೭] ಆದ್ದರಿಂದ ಇದರ ಕಾಲವನ್ನು ಹದಿನೈದನೆಯ ಶತಮಾನವೆಂದು ಗುರುತಿಸಲಾಗಿದೆ.[೮] ಗುಲ್ಬರ್ಗಾ, ಗೋಲ್ಕಂಡಾ, ಫಿರೋಜಾಬಾದ್, ಬೀದರದಲ್ಲಿನ ಸಮಾಧಿ ಕಟ್ಟಡಗಳ ಮತ್ತು ಇತರ ಕಟ್ಟಡಗಳ ವಾಸ್ತುಲಕ್ಷಣಗಳನ್ನು ಕಡ್ಡಿರಾಮಪುರದ ಈ ಕಟ್ಟಡದಲ್ಲಿ ಕಾಣಬಹುದಾಗಿದೆ. ಮತ್ತೊಂದು ಗೋರಿ ಕಟ್ಟಡವು ಸಣ್ಣದಿದ್ದು ಚೌಕಾಕಾರದ ತಲವಿನ್ಯಾಸ ಹೊಂದಿದೆ. ಇದು ಪ್ರವೇಶದ್ವಾರ ಹೊಂದಿದ್ದು ಮೇಲ್ಭಾಗದಲ್ಲಿ ಗುಮ್ಮಟವಿದೆ.[೯]

ಕ್ರಿ.ಶ. ೧೫೬೫ರ ಅವಧಿಯವರೆಗೂ ಪೆನುಗೊಂಡೆಯು ವಿಜಯನಗರ ಸಾಮ್ರಾಜ್ಯದ ಪ್ರಾಂತೀಯ ಮುಖ್ಯ ಪಟ್ಟಣಗಳಲ್ಲಿ ಒಂದಾಗಿತ್ತು. ರಕ್ಕಸತಂಗಡಿ ಕದನದ ನಂತರದ ಅದೇ ರಾಜಧಾನಿಯಾಗಿ ಸಾಮ್ರಾಜ್ಯ ಅಧಿಕಾರ ಅಲ್ಲಿಂದಲೇ ನಡೆಯಿತು. ಹೀಗಾಗಿ ರಾಜಧಾನಿಯ ವಿವಿಧ ಅವಶ್ಯಕತೆಗಳನ್ನು ಪೂರೈಸಲು ಆ ನಗರದಲ್ಲಿ ಅನೇಕ ಬಾವಿಗಳನ್ನು ನಿರ್ಮಿಸಲಾಯಿತು. ಇಂದಿಗೂ ಅಲ್ಲಿ ನಾವು ಗಚ್ಚಿನ ಗೋಡೆಗಳನ್ನು ಹೊಂದಿರುವ ಅನೇಕ ಪುರಾತನ ಬಾವಿಗಳನ್ನು ಕಾಣಬಹುದು. ಕೌತುಕದ ಸಂಗತಿ ಎಂದರೆ ಒಂದು ಬಾವಿಗೆ ವಿಶೇಷ ಮಾದರಿಯ ಪ್ರವೇಶದ್ವಾರವನ್ನು ನಿರ್ಮಿಸಲಾಗಿದೆ. ಅದು ನಂದಿಯ ಆಕಾರ ಹೊಂದಿದ್ದು ಇಟ್ಟಿಗೆ ಮತ್ತು ಗಾರೆಯ ಕಾರ್ಯದಿಂದ ಒಡಗೂಡಿದೆ. ನಂದಿಯ ನಾಲ್ಕು ಕಾಲುಗಳ ಅಡಿಯಲ್ಲಿ ಕಮಾನುಗಳನ್ನು ರಚನೆ ಈ ಕಮಾನುಗಳಿಂದ ನಾಲ್ಕು ದಿಕ್ಕಿನಲ್ಲಿಯೂ ಬಾವಿಯ ಒಳಗಡೆ ಇಳಿದು ಹೋಗಲು ಸೋಪಾನಗಳಿವೆ. ಬಹುಶಃ ಈ ಬಾವಿಯನ್ನು ಕೇವಲ ಧಾರ್ಮಿಕ ಹಾಗೂ ಕುಡಿಯುವ ನೀರಿಗೊಂದೇ ರಚಿಸಿರಬಹುದು.[೧೦] ಸಾಂಪ್ರದಾಯಿಕ ಹೇಳಿಕೆಯಂತೆ ಈ ನಗರದ ಬಾವಿಗಳನ್ನು ವಿಜಯನಗರದ ಚಕ್ರವರ್ತಿಯಾಗಿದ್ದ ಕೃಷ್ಣದೇವರಾಯನು ಕಟ್ಟಿಸಿದನೆಂದೇ ಹೇಳಲಾಗುತ್ತದೆ. ಏಕೆಂದರೆ ಅರಸನ ವಸತಿ ನಗರಗಳಲ್ಲಿ ಇದು ಒಂದಾಗಿತ್ತು.[೧೧]

ದೊಡ್ಡದಾದ ಮಟ್ಟಸವಾದ ಚಾವಣಿ ಹೊಂದಿರುವ ಸಮಾ ಕಟ್ಟಡವೊಂದು ತಳಾರಿಘಟ್ಟದ ರಸ್ತೆಯ ಸಮೀಪ ಕಂಡುಬರುತ್ತದೆ. ಇದರ ಗೋಡೆಗಳು ಗಾರೆಯ ಹೊರಪದರವನ್ನು ಹೊಂದಿವೆ. ಆಯಾತಾಕಾರದ ತಲವಿನ್ಯಾಸ ಹೊಂದಿದೆ. ಇದರ ಉತ್ತರಕ್ಕೆ ಮತ್ತೊಂದು ಮಟ್ಟಸ ಚಾವಣಿಯ ಗೋರಿ ಕಟ್ಟಡ ಕಂಡುಬರುವುದು. ಇದು ಸಣ್ಣದಾಗಿದ್ದು ಆಯಾತಾಕಾರದ ತಲವಿನ್ಯಾಸ ಹೊಂದಿದೆ. ಇದರ ಮೇಲ್ಭಾಗದಲ್ಲಿ ಕೈಪಿಡಿ ಗೋಡೆ ಇದ್ದು ಅದರಲ್ಲೂ ಕೋಷ್ಟಗಳನ್ನು ರಚಿಸಲಾಗಿದೆ. ಇದರ ಪಶ್ಚಿಮಕ್ಕೆ ಸಣ್ಣದಾದ ಚೌಕಾಕಾರದ ತಲವಿನ್ಯಾಸ ಹೊಂದಿರುವ ಕಟ್ಟಡವಿದ್ದು, ಅದರ ಭಾಗಗಳಲ್ಲಿ ಕುಸಿದುಬಿದ್ದಿವೆ. ಇದು ಸಹ ಗೋರಿ ಕಟ್ಟಡವಾಗಿದೆ. ಇದರ ಪರಿಸರದಲ್ಲಿ ಮತ್ತೊಂದು ಮಟ್ಟಸ ಚಾವಣಿಯ ಗೋರಿ ಕಟ್ಟಡವನ್ನು ಕಾಣಬಹುದು.

ಅರಮನೆ ಪ್ರದೇಶದಲ್ಲಿನ ದಣ್ಣಾನಾಯಕ ಪ್ರಕಾರದಲ್ಲಿ ಆಗ್ನೇಯ ಭಾಗದಲ್ಲಿರುವ ರಚನೆಯೊಂದನ್ನು ಮಸೀದಿ ಎಂದು ಕರೆಯಲಾಗುವುದು. ಇದು ಎತ್ತರದ ಕಂಬಗಳನ್ನು ಹೊಂದಿದ ಕಟ್ಟಡವಾಗಿದ್ದು. ಮೂರು

ಕಡೆ ಗೋಡೆಗಳನ್ನು ಹೊಂದಿದೆ. ಚೌಕಾಕಾರದ ಕಂಬಗಳಿಂದ ಕಮಾನುಗಳು ಹೊಮ್ಮಿವೆ. ಚಾವಣಿಯಲ್ಲಿ ತಲೆಕೆಳಗಾದ ಕಮಲದ ಒಂಭತ್ತು ಗುಮ್ಮಟಗಳಿವೆ. ಇಮ್ಮಡಿ ದೇವರಾಯನು ಸಮರ್ಥ ಅಶ್ವಾರೋಹಿಗಳಾದ ಮಹಮ್ಮದಿಯರನ್ನು ಸೈನ್ಯದಲ್ಲಿ ಸೇರಿಸಿಕೊಂಡು ಅವರಿಗಾಗಿ ಮಸೀದಿಯನ್ನು ಕಟ್ಟಿಸಿದನೆಂದು ಫೆರಿಸ್ತಾ ತಿಳಿಸುತ್ತಾನೆ. ಈ ಕಟ್ಟಡವೆ ಆ ಮಸೀದಿ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ವಾಸ್ತವವಾಗಿ ಕಮಾನು ಶೈಲಿಯನ್ನು ಹೊರತುಪಡಿಸಿದರೆ ಮಸೀದಿಗಳಿಗಿರಬೇಕಾದ ಯಾವ ಲಕ್ಷಣವೂ ಇಲ್ಲಿ ಕಂಡುಬರುವುದಿಲ್ಲ. ತಳಪಾಯದಲ್ಲಿ ಹಿಂದೂ ಶಿಲ್ಪಗಳು ಉದುರಿ ಹೋದ ಗಾರೆಯ ಮೂಲಕ ಕಾಣಿಸಿಕೊಂಡಿವೆ. ಆದ್ದರಿಂದ ಇದನ್ನು ಮಸೀದಿ ಎನ್ನಲಾಗದೆಂದು ಬಾ.ರಾ.ಗೋಪಾಲ್ ತಿಳಿಸುತ್ತಾರೆ.[೧೨]

ಹೊಸಪೇಟೆಯ ನೆಹರೂ ಕಾಲೋನಿ ಪ್ರದೇಶ ಹಿಂದೆ ತಿರುಮಲಾದೇವಿ ಪಟ್ಟಣದ ನೆಲೆಯಾಗಿತ್ತು. ಇದರ ನೈರುತ್ಯದಲ್ಲಿರುವ ಎರಡು ಗೋರಿ ಕಟ್ಟಡಗಳು ವಿನ್ಯಾಸದಲ್ಲಿ ಕಡ್ಡಿರಾಮಪುರದ ಅಪೂರ್ವವಾದ ಗೋರಿ ಕಟ್ಟಡವನ್ನು ಹೋಲುತ್ತವೆ. ಈ ಎರಡು ಕಟ್ಟಡಗಳ ಮುಂದಿನ ಭಾಗಗಳು ಒಳಗೋಡೆಯ ಕಮಾನುಗಳನ್ನು ಈ ಎರಡು ಕಟ್ಟಡಗಳ ಮುಂದಿನ ಭಾಗಗಳು ಒಂದು ಗುಮ್ಮಟರಹಿತವಾಗಿದ್ದು ಮತ್ತೊಂದು ಗುಮ್ಮಟ ಹೊಂದಿದೆ. ವಿಜಯಯನಗರ ಕಾಲಕ್ಕೆ ಇಲ್ಲಿ ಮುಸ್ಲಿಂ ವಸತಿ ನಲೆ ಇತ್ತೊಂಬುದು ತಿಳಿಯುತ್ತದೆ.

ಟಿಪ್ಪುವಿನ ಕಾಲದ ಹೊಸಪೇಟೆಯ ಶಾಸನವೊಂದು ಗಫೂರ್‌ಖಾನನೆಂಬುವನು (ಹೊಸಪೇಟೆಯಲ್ಲಿ) ಮಸೀದಿಯೊಂದನ್ನು ನಿರ್ಮಿಸಿದನೆಂದು ತಿಳಿಸುತ್ತದೆ.[೧೩] ಇದು ಹತ್ತನೆಯ ವಾರ್ಡಿನಲ್ಲಿದ್ದು ಇಲ್ಲಿ ಅರಬ್ಬಿಶಾಲೆಯನ್ನು ನಡೆಸಲಾಗುವುದು. ಎಂಟನೆಯ ವಾರ್ಡಿನಲ್ಲಿರುವ ದರ್ಗಾ ಮಸೀದಿ ಪ್ರಸಿದ್ಧವಾದುದು. ಮುಸ್ಲಿಂ ಸಂತನಾದ ಸೈಯದ್ ಮಹಮ್ಮದ್ ಷಾ ಖಾದ್ರಿಯವರ ಗೋರಿ ಇಲ್ಲಿದೆ. ಬಿಜಾಪುರದಿಂದ ಆಗ ಮಿಸಿ ಮಸೀದಿಯನ್ನು ನಿರ್ಮಾಣ ಮಾಡಿದ ಈ ಸಂತನ ಉರುಸು ವರ್ಷಕ್ಕೆ ಎರಡು ಬಾರಿ ನಡೆಯುತ್ತದೆ. ಈ ಸಂದರ್ಭದಲ್ಲಿ ಕಲ್ವಾಲಿ ಮುಂತಾದ ಕಾರ್ಯಕ್ರಮಗಳಿರುತ್ತವೆ.[೧೪] ಚಿತ್ತವಾಡಿಗಿಯಲ್ಲಿ ಹಿರೇಮಸೀದಿ, ರಾಮನಮಲೆ ಮಸೀದಿ, ಕಾಕರ ಮಸೀದಿ, ಸರದಾರ ಮಸೀದಿ, ವರಕೇರಿ ಮಸೀದಿ, ಪಿಂಜಾರ ಮಸೀದಿ ಹಾಗೂ ಜುಮ್ಮಾ ಮಸೀದಿಗಳಿವೆ. ರೈಲ್ವೆ ನಿಲ್ದಾಣದ ಹತ್ತಿರ (ಸುಮಾರು ೧೯೬೦) ಈಚೆಗೆ ನಿರ್ಮಿತವಾದ ಮಸೀದಿ ಇದೆ. ೨ನೆಯ ವಾರ್ಡಿನಲ್ಲಿ ಜುಮ್ಮಾ ಮಸೀದಿ, ೯ನೆಯ ವಾರ್ಡಿನಲ್ಲಿ ಮೋಮಿನ್ ಮಸೀದಿ, ೧೮ನೆಯ ವಾರ್ಡಿನಲ್ಲಿ ಬಣಗಾರ ಮಸೀದಿ, ೧೯ನೆಯ ವಾರ್ಡಿನಲ್ಲಿ ಕಂಚುಗಾರ ಪೇಟೇ ಮಸೀದಿ, (ಹಾಗೂ ಕೌಲುಪೇಟೆ) ಮಸೀದಿಗಳು ಮುಖ್ಯವಾಗಿವೆ. ಇತ್ತೀಚೆಗೆ ಹಂಪಿ ರಸ್ತೆಯಲ್ಲಿ ಹೊಸದಾಗಿ ಮಸೀದಿಯೊಂದು ಸುಂದರವಾಗಿ ನಿರ್ಮಾಣಗೊಂಡಿದೆ. ಚಿತ್ತವಾಡಿಗಿಯಲ್ಲಿ ಮತ್ತು ಬಸವಣ್ಣ ಕಾಲುವೆಯ ಹತ್ತಿರ ಈದ್ಗಾ ಮೈದಾನಗಳು ಕುತುಬಗಳಿದ್ದು, ಅವುಗಳಲ್ಲಿ ವರ್ಷಕ್ಕೆ ಎರಡು ಬಾರಿ ಸಾಮೂಹಿಕವಾಗಿ ನಮಾಜು ನಡೆಯುತ್ತದೆ. ಇಲ್ಲಿ ದಾದಾಪೀರ್ ದರ್ಗಾ ಮತ್ತು ಗುಲ್‌ಬಾಷ್‌ವಾಲಿ ದರ್ಗಾಗಳು ಪ್ರಮುಖವಾಗಿದ್ದು. ಉರುಸುಗಳು ನಡೆಯುತ್ತವೆ. `ಮೂರು ಗೋರಿ` ಎಂದು ಪ್ರಸಿದ್ಧ ಪಡೆದ

ಗೋರಿಗಳು ಜಂಬುನಾಥ ರಸ್ತೆಯಲ್ಲಿವೆ. ಮೊಹರಂ ಹಬ್ಬವನ್ನು ಇಲ್ಲಿ ಜನತಾ ಹಬ್ಬವಾಗಿ ಆಚರಿಸಲಾಗುತ್ತದೆ. ಚಂದಾಹುಸೇನ್ ಸಾಬ್ ಮತ್ತು ರಾಮನಮಲೆ ಸಾಬ್ ಪೀರ್ಲ ದೇವರು ಖ್ಯಾತಿಪಡೆದಿವೆ. ಹಿಂದೂ ಮುಸ್ಲಿಮರು ಐಕ್ಯತೆಯಿಂದ ಹಬ್ಬವನ್ನು ಆಚರಿಸುತ್ತಾರೆ.

ಇನ್ನು ಕಮಲಾಪುರದಿಂದ ಪೂರ್ವಕ್ಕೆ ಸುಮಾರು ೪.೫ ಕಿ.ಮೀ ದೂರದಲ್ಲಿರುವ ನಲ್ಲಾಪುರದ ಹತ್ತಿರ ಚಿಕ್ಕದಾದ ಗೋರಿ ಕಟ್ಟಡವೊಂದರ ರಚನೆಯನ್ನು ಕಾಣಬಹುದು. ಇದು ಚೌಕಾಕಾರದ ತಲವಿನ್ಯಾಸ ಹೊಂದಿದ್ದು ಮೇಲ್ಭಾಗದಲ್ಲಿ ಗುಮ್ಮಟವಿದೆ. ಗುಮ್ಮಟವು ಜ್ಯಾಮಿತಿ ಅಲಂಕಾರವನ್ನು ಹೊಂದಿದೆ.[೧೫] ಮಸೀದಿಗಳು ಹೊಸಪೇಟೆ ತಾಲೂಕಿನಾದ್ಯಂತ ಕಂಡುಬರುತ್ತವೆ. ಕಮಲಾಪುರ, ಬೈಲುವದ್ದಿಗೇರಿ, ಕೊಜಿಗಿನ ಹಾಳು, ಗಾದಿಗನೂರು, ಗುಂಡ್ಲುವದ್ದಿಗೇರಿ, ಧರ್ಮಸಾಗರ, ಇಂಗಳಗಿ, ಪಾಪಿನಾಯಕನಹಳ್ಳಿ, ವಡ್ಡರಹಳ್ಳಿ, ಕಾರಿಗನೂರು, ಕಾಕುಬಾಳು, ವೆಂಕಟಾಪುರ, ಕಡ್ಡಿರಾಮಪುರ, ಬೂವನಹಳ್ಳಿ, ಕೊಂಡನಾಯಕನಹಳ್ಳಿ, ಹೊಸಮಲಪನಗುಡಿ ಮತ್ತು ಬುಕ್ಕಸಾಗರಗಳಲ್ಲಿ ಮಸೀದಿಗಳಿವೆ. ವಿಜಯನಗರದಲ್ಲಿ ಕುಸ್ತಿಯ ಕಲೆಯು ಮಲ್ಲಕಾಳಗ, ಬಾಹುಯುದ್ಧ ಮುಂತಾದ ಹೆಸರುಗಳಿಂದ ಅತ್ಯಂತ ಜನಪ್ರಿಯವಾಗಿತ್ತು. ಇದು ಸಮರಕಲೆಯ ಒಂದು ಭಾಗವಾಗಿ ಮನರಂಜನೆಯ ಕ್ರೀಡಾ ಪ್ರದರ್ಶನವಾಗಿ ರಾಜರ ಮತ್ತು ಜನರ ಮನ್ನಣೆಗೆ ಪಾತ್ರವಾಗಿತ್ತು. ಅಬ್ದುಲ್ ರಜಾಕ್, ನ್ಯೂನಿಜ್, ಪಯಸ್, ಬಾರ್ಬೋಸಾ ಮುಂತಾದ ವಿದೇಶಿ ಪ್ರವಾಸಿಗರು ಕುಸ್ತಿಯಾಟವನ್ನು ಕಣ್ಣಾರೆ ಕಂಡು ಹಲವು ಸನ್ನಿವೇಶಗಳನ್ನು ತಮ್ಮ ಪ್ರವಾಸ ಕಥನಗಳಲ್ಲಿ ದಾಖಲಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ವಿಜಯನಗರದ ಕುಸ್ತಿಯ ಕುರಿತು ಶಾಸನಗಳಲ್ಲಿ ಏನಾದರೂ ಉಲ್ಲೇಖಗಳು ಸಿಗುತ್ತವೆಯೇ ಎಂದು ನೋಡಿದಾಗ ಮಾಹಿತಿಗಳು ದೊರೆಯುವುದಿಲ್ಲ. ಜನಜೀವನದ ಒಂದು ಭಾಗವಾಗಿದ್ದ ಈ ಕಲೆಯ ಬಗೆಗೆ ಆಧಾರ ನೀಡಬಲ್ಲ ಶಾಸನಗಳು ಬಹಳಷ್ಟು ಇಲ್ಲ. ಲಭ್ಯವಾಗಿರುವ ಶಾಸನಗಳ ಪೈಕಿ ಅಪರೂಪ ಎನ್ನುಂತೆ ಎರಡು ಶಾಸನಗಳು ಮುಖ್ಯವಾಗಿ ಗಮನ ಸೆಳೆಯುತ್ತವೆ. ಮಾಲ್ಯವಂತ ಬೆಟ್ಟದಿಂದ ತಳವಾರಘಟ್ಟದ ಕಡೆಗೆ ಹೋಗುವ ರಸ್ತೆಯಲ್ಲಿ ಅಸಂಖ್ಯಾತ ಗೋರಿಗಳನ್ನು ವಸತಿ ವಿನ್ಯಾಸಗಳನ್ನು ಒಳಗೊಂಡಿರುವ ಒಂದು ಬೆಟ್ಟದ ತಪ್ಪಲು ಪ್ರದೇಶದಲ್ಲಿ ಒಂದು ಶಾಸನ ದೊರೆತಿದೆ.[೧೬]

ವಿಜಯನಗರದ ಪ್ರಜೆಗಳಾಗಿದ್ದ ಮುಸ್ಲಿಮರು ವಾಸವಾಗಿದ್ದ ನೆಲೆಯಿದು. ಇಲ್ಲಿರುವ ಅಸಂಖ್ಯಾತ ಕುರುಹುಗಳನ್ನು ಆಧರಿಸಿ ನಡೆದಿರುವ ಶೋಧನೆಗಳು ಇದನ್ನು ಸ್ಪಷ್ಟಪಡಿಸಿವೆ. ಇಲ್ಲಿರುವ ಅಹಮದ್ ಖಾನ್ ಧರ್ಮಶಾಲೆ (ಮಸೀದಿ) ಹತ್ತಿರದಲ್ಲಿರುವ ಮಂಟಪದ ಗುಂಡಿನಲ್ಲಿ ಶಾಸನವೊಂದನ್ನು ಕೆತ್ತಲಾಗಿದೆ.[೧೭] ಕ್ರಿ.ಶ. ೧೪೧೪ ಕಾಲದ ಈ ಶಾಸನವು ಮುಸ್ಲಿಂ ಪೈಲ್ವಾನನೊಬ್ಬ ಬಗ್ಗೆ ಉಲ್ಲೇಖ ನೀಡುತ್ತದೆ. ಹಂಪಿ ಪರಿಸದಲ್ಲಿ ದೊರೆತಿರುವ ಶಾಸನಗಳ ಪೈಕಿ ಸುಮಾರು ಹತ್ತು ಶಾಸನಗಳು ಮುಸ್ಲಿಮರು ವಿಜಯನಗರ ಸಮೃದ್ಧ ಬದುಕು ಸಾಗಿಸಿದರೆಂಬುದನ್ನು ಉಲ್ಲೇಖಿಸುತ್ತವೆ. ಪ್ರಮುತ್ತದ ಆಡಳಿತಕ್ಕೆ, ಸಂಬಂಧಪಟ್ಟ, ಕೆಲವು

ಸೇವೆಗಳಲ್ಲಿ ಜನಜೀವನದ ವಿವಿಧ ಕ್ಷೇತ್ರಗಳಲ್ಲಿ ಅವರು ಎಲ್ಲರಂತೆ ಪರಿಶ್ರಮ ಹೊಂದಿದ್ದರೆಂದು ತಿಳಿಯುತ್ತದೆ. ಮುಖ್ಯವಾಗಿ ಸೈನ್ಯ ಬಲದಲ್ಲಿ ಅವರಿಗೆ ಪ್ರಾಮುಖ್ಯತೆ ನೀಡಲಾಗಿದೆ. ವಿಜಯನಗರದ ಸೈನ್ಯವನ್ನು ಬಲಪಡಿಸುವುದಕ್ಕಾಗಿ ಎರಡನೆಯ ದೇವರಾಯನು ಅಶ್ವದಳ, ಪದಾತಿದಳ ಮತ್ತು ಬಿಲ್ಲು ಪಡೆಯಲ್ಲಿ ಹಲವು ಬದಲಾವಣೆಗಳನ್ನು ಮಾಡಿಕೊಂಡಿದ್ದನೆಂದು ತಿಳಿಯುತ್ತದೆ. ಈ ಮೂರು ವಿಧಧ ಸಮರಕಲೆಗಳಲ್ಲಿ ಮುಸಲ್ಮಾನರು ಹೆಚ್ಚಿನ ಪರಿಶ್ರಮ ಹೊಂದಿರುವುದನ್ನು ಅರಿತಿದ್ದ ಆತನು ತನ್ನು ಸೈನ್ಯ ಸಂಘಟನೆಯಲ್ಲಿ ಅವರು ಸೇರುವುದಕ್ಕೆ ಉತ್ತೇಜನ ನೀಡಿದ್ದನು.[೧೯]

ಕ್ರಿ.ಶ. ೧೪೩೦ರ ಶ್ರೀರಂಗ ಪಟ್ಟಣದ ಶಾಸನವೊಂದರ ಪ್ರಕಾರ ಎರಡನೆಯ ದೇವರಾಯನು ಸೈನ್ಯ ವ್ಯವಸ್ಥೆಯಲ್ಲಿ ೧೦ ಸಾವಿರ ಮುಸ್ಲಿಮರ ಕುದುರೆ ಪಡೆಯನ್ನು ಹೊಂದಿದ್ದನು. ಯುದ್ಧ ಕಲೆಯಲ್ಲಿ ಪರಿಣತರಾದ ಮುಸ್ಲಿಮರನ್ನು ಸೇರಿಸಿಕೊಳ್ಳುವುದರ ಮೂಲಕ ಆತ ಸೈನ್ಯ ಸಂಘಟನೆಯನ್ನು ಬಲಪಡಿಸಿದನು. ಅವರಿಗೆ ಅನೇಕ ಜಾಗೀರುಗಳನ್ನು ನೀಡಿದನು. ವಿಜಯನಗರದಲ್ಲಿ ಮಸೀದಿಗಳನ್ನು ನಿರ್ಮಿಸುವುದಕ್ಕೆ ಮತ್ತು ಮುಸಲ್ಮಾನರು ತಮ್ಮ ಧಾರ್ಮಿಕ ಆಚರಣೆಗಳನ್ನು ನಡೆಸಿಕೊಂಡು ಹೋಗುವುದಕ್ಕೆ ತನ್ನ ಅಧಿಕಾರಿಗಳಿಂದಾಗಲಿ, ಇತರ ಪ್ರಜೆಗಳಿಂದಾಗಲಿ, ಅಡಿಯಾಗಲಿ, ಅಪಚಾರವಾಗಲಿ ಆಗಕೂಡದೆಂದು ಆಜ್ಞೆ ಮಾಡಿದ್ದನು. ಒಟ್ಟಿನಲ್ಲಿ ಹೇಳುವುದಾದರೆ ಹಂಪಿ ಪರಿಸರದಲ್ಲಿ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪ ಮತ್ತು ಜನಜೀವನ ವಿಜಯನಗರ ಸಾಮ್ರಾಜ್ಯದ ಅರಸರು ಅನೇಕ ಮುಸ್ಲಿಂ ಅಥವಾ ಇಸ್ಲಾಮಿಕ್ ಸ್ಮಾರಕಗಳನ್ನು ಕಟ್ಟಲು ಅನುಮತಿಯನ್ನು ಕೊಟ್ಟಿದ್ದರು. ವಿಜಯನಗರ ಸಾಮ್ರಾಜ್ಯದ ಹಂಪಿ ಪರಿಸರದ ಆಸುಪಾಸಿನಲ್ಲಿ ಅನೇಕ ಸ್ಮಾರಕಗಳಿವೆ. ಅರಸರು ಮುಸ್ಲಿಮರಿಗೆ ಕೊಟ್ಟ ಪ್ರೋತ್ಸಾಹ ಮುಸ್ಲಿಂ ಸೈನಿಕರನ್ನು ತಮ್ಮ ಸೇನೆಯಲ್ಲಿ ಸೇರಿಸಿಕೊಂಡಿದ್ದು ಸಾಮ್ರಾಜ್ಯದಲ್ಲಿ ಮುಸ್ಲಿಮರನ್ನು ಮುಕ್ತವಾಗಿ ಸಂಚರಿಸಲು ಮತ್ತು ಎಲ್ಲಾ ರೀತಿಯಿಂದಲೂ ಮುಸ್ಲಿಮರಿಗೆ ಈ ಸಾಮ್ರಾಜ್ಯದಲ್ಲಿ ಅವಕಾಶವಿತ್ತು. ಈ ಕಾಲದ ಅರಸರು ಹಿಂದೂ ಮುಸ್ಲಿಮರನ್ನು ಐಕ್ಯತಾ ದೃಷ್ಟಿಯಿಂದ ಕಂಡರು. ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪದ ಮೂಲಕ ಅಂದಿನ ಮಿಲಿಟರಿ ವ್ಯವಸ್ಥೆ ನಾಗರಿಕ ಸೇವೆಯನ್ನು ಮುಸ್ಲಿಮರ ಐಕ್ಯತ ಬದುಕನ್ನು ಅರಿಯಬಹುದಾಗಿದೆ.[೨೦]

**ಟಿಪ್ಪಣಿಗಳು**

೧. ವೆಂಕಟರಾವ್ ಜಿ, ೧೯೪೪, **ಸ್ಟೇಟಸ್ ಆಫ್ ಮುಸ್ಲಿಂ ಇನ್ ದಿ ವಿಜಯನಗರ ಎಂಪೈರ್**, ಇನ್ ದಿ ಪ್ರೋಸಿಸಿಂಗ್ಸ್ ಆಫ್ ದಿ ಇಂಡಿಯನ್ ಹಿಸ್ಟರಿ ಕಾಂಗ್ರೆಸ್ ಸೆವೆಂಥ್ ಸೆಷನ್, ಅಲಹಬಾದ್, ಪುಟ ೨೫೧-೨೫೬

೨. ಸದಾನಂದ ಎಸ್, ೧೯೬೪-೬೫, **ಇಸ್ಲಾಮಿಕ್ ಇನ್‌ಫ್ಲುಎನ್ಸ್ ಇನ್ ವಿಜಯನಗರ ಕ್ಯಾಪಿಟಲ್**, ಇನ್ ಜೆ.ಎ.ಎಚ್.ಆರ್.ಎಸ್, XXX, ಪುಟ ೮೫-೮೮

೩. ನಾಗರಾಜರಾವ್ ಎಂ.ಎಸ್, ೧೯೮೩, **ವಿಜಯನಗರ ಪ್ರೋಗ್ರೆಸ್ ಆಫ್ ರಿಸರ್ಚ್ ೧೯೭೯-೮೭,** ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಪು.೧೦೧

೪. ಅದೇ

೫. **ಸೌ.ಇ.ಇ,** ix-iiii, ನಂ ೪೪೭, ಪುಟ ೪೫೭

೬. ಸಿವಿಲ್, ಆರ್, ೧೯೦೦, ಎ **ಫರ್ಗಟನ್ ಎಂಪೈರ್,** ಲಂಡನ್, ಪುಟ ೨೪೭

೭. ನಾಗರಾಜರಾವ್ ಎಂ.ಎಸ್, **ಪೂರ್ವೋಕ್ತ,** ಪುಟ ೧೧೯

೮. ಅದೇ

೯. ಅದೇ

೧೦. ಗೋಪಾಲ ಬಾರಾ, **ವಿಜಯನಗರ ವಾಸ್ತುಶಿಲ್ಪ,** ಪಿಬಿಎಸ್, ಬೆಂಗಳೂರು, ಪುಟ ೨೬

೧೧. ದೇವಕುಂಜರಿ ಡಿ, ೧೯೮೩, **ಹಂಪಿ ಭಾರತ ಪುರಾತತ್ವ ಸರ್ವೇಕ್ಷಣಾ,** ನವದೆಹಲಿ, ಪು.೩೩

೧೨. **ಅರಿ, ಸೌ.ಇ.ಎ,** ೧೯೨೨, ನಂ ೬೮೦

೧೩. ಸರ್ವೇಶ್ವರಸ್ವಾಮಿ ಎಚ್, ೧೯೬೪, **ಸುವರ್ಣ ಪುಷ್ಪಾಂಜಲಿ,** ಹೊಸಪೇಟೆ ಪುರಸಭೆ ಸುವರ್ಣ ಮಹೋತ್ಸವದ ಸ್ಮರಣ ಸಂಚಿಕೆ, ಹೊಸಪೇಟೆ, ಪುಟ ೫೬

೧೪. ದೇವರಾಜ ಅಂಡ್ ಪಾಟೀಲ್ ಸಿ.ಎಸ್, ೧೯೯೧, **ವಿಜಯನಗರ ಪ್ರೋಗ್ರೆಸ್ ಆಫ್ ರಿಸರ್ಚ್ ೧೯೮೪-೮೭,** ಪುಟ ೧೯೦

೧೫. ಡಾ.ಸಿ.ಮಹಾದೇವ, ಡಾ.ಎ.ಸುಬ್ಬಣ್ಣ ರೈ, ಡಾ.ಮಾಧವ ಪೆರಾಜೆ, **ಹೊಸಪೇಟೆ ತಾಲೂಕು ದರ್ಶನ,** ಪುಟ ೧೮೨-೧೮೫

೧೬. ಡಾ.ದೇವರ ಕೊಂಡಾರೆಡ್ಡಿ (ಸಂ), **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ -೩ (ಹಂಪಿ ಶಾಸನಗಳು)** (ಇನ್ನು ಮುಂದೆ ಕವಿಶಾ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಶಾಸನ ಸಂಖ್ಯೆ ೩೧೨, ಪುಟ ೨೨೫

೧೭. **ಕವಿಶಾ,** ಅದೇ ಸಂಪುಟ, ಪ್ರಸ್ತಾವನೆ, ಪುಟ

೧೮. ಡಾ.ವಸುಂಧರಾ ಫಿಲಿಯೋಜಾ, **ವಿಶ್ವ ಪರಂಪರೆಯಾದಿಯಲ್ಲಿ ಹಂಪೆ,** ಕರ್ಮವೀರ ದೀಪಾವಳಿ ವಿಶೇಷಾಂಕ, ೨೦೦೦, ಪುಟ ೮೧೭ (ಅಹಮದ್ ಖಾನ್ ಕಟ್ಟಿಸಿದ ಕಟ್ಟಡವನ್ನು 'ಧರ್ಮಶಾಲೆ'

ಎಂದು ಆತ ಕರೆದಿರುವುದರಿಂದ ಫಿಲಿಯೋಜಾ ಅವರು ಅದನ್ನು ಅನ್ನ ಛತ್ರವಾಗಿರಬೇಕೆಂದು ಊಹಿಸಿದ್ದಾರೆ. ಆದರೆ ವಾಸ್ತವಾದಲ್ಲಿ ಈ ಕಟ್ಟಡ ಅನ್ನಛತ್ರದಲ್ಲಿ: ವಾಸ್ತು ನಿರ್ಮಾಣದ ಒಳಲಕ್ಷಣಗಳ ಪ್ರಕಾರ ಅದು ಮಸೀದಿ ಎಂದು ದೃಢಪಟ್ಟಿದೆ.)

೧೯. ಎಸ್.ವೈ.ಸೋಮಶೇಖರ್, **ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧಾನೀತಿ** (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೮

೨೦. ಡಾ.ದೇವರಕೊಂಡಾರೆಡ್ಡಿ (ಸಂ), **ಹಂಪಿ ಸಂಪುಟ,** (ವಿಜಯನಗರ ಶಾಸನಗಳಲ್ಲಿ ಕುಸ್ತಿಯ ಉಲ್ಲೇಖಗಳು, ಜೈನುಲ್ಲಾ ಬಳ್ಳಾರಿ ಪುಟ, ೧೭೭-೧೭೯), ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಸಮಾರೋಪ

ಹಂಪಿ ಪರಿಸರದಲ್ಲಿ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಸ್ಮಾರಕಗಳ ಚಾರಿತ್ರಿಕ ಅಧ್ಯಯನ ಎಂಬ ಶೀರ್ಷಿಕೆಯನ್ನು ಹೊತ್ತ ಈ ನಿಬಂಧವು ಹಂಪಿ ಪರಿಸರದಲ್ಲಿ ಕಂಡುಬರುವ ಸ್ಮಾರಕಗಳನ್ನು ಕುರಿತು ಸೂಕ್ಷ್ಮವಾಗಿ ವಿಶ್ಲೇಷಿಸುವ ಒಂದು ಕಿರು ಪ್ರಯತ್ನವಾಗಿದೆ. ವಿಜಯನಗರ ಕಾಲದಲ್ಲಿ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪ ಪ್ರಾಮುಖ್ಯತೆ ಪಡೆದಿರುವುದು ವಿಶೇಷವಾಗಿದೆ. ಆದ್ದರಿಂದ ಈ ಅಧ್ಯಯನದಿಂದ ಇಂಡೋ-ಇಸ್ಲಾಮಿಕ್ ಶೈಲಿಯನ್ನು ಉಗಮ, ವಿಕಾಸ, ಲಕ್ಷಣಗಳು, ಸ್ಮಾರಕಗಳ ವೈಶಿಷ್ಟ್ಯತೆಗಳನ್ನು ವಿಶ್ಲೇಷಿಸಲಾಗಿದೆ.

ವಿಜಯನಗರ ಸಾಮ್ರಾಜ್ಯವು ಚಾರಿತ್ರಿಕವಾಗಿ ಮಹತ್ವದ ಕಾಲಘಟ್ಟವನ್ನು ಹೊಂದಿರುತ್ತದೆ. ಈ ಸಾಮ್ರಾಜ್ಯದ ಅರಸರು ಕೊಟ್ಟ ಕೊಡುಗೆ ಅಪಾರವಾದುದು. ಕಲೆ, ಶಿಲ್ಪ, ವಾಸ್ತು, ಸಾಹಿತ್ಯ ಇತರೆ ಕ್ಷೇತ್ರಗಳನ್ನು ಉಲ್ಲೇಖ ಮಾಡಬಹುದಾಗಿದೆ. ಕಲೆ ಮತ್ತು ಸಾಹಿತ್ಯಕ್ಕೆ ಕೊಟ್ಟ ಪ್ರೋತ್ಸಾಹದಿಂದ ಅವರ ಜಾತ್ಯಾತೀತ ಮನೋಭಾವ ಕಲಾಸೌಂದರ್ಯದ ಪ್ರಜ್ಞೆಯನ್ನು ಸಾಬೀತುಪಡಿಸುವ ಸ್ಮಾರಕಗಳಿವೆ. ಧಾರ್ಮಿಕ ಕಟ್ಟಡಗಳನ್ನು ಹೊರತುಪಡಿಸಿದರೆ ಉಳಿದಂತೆ ನಾಗರಿಕ ಮತ್ತು ರಕ್ಷಣಾ ವಾಸ್ತುಶಿಲ್ಪದಲ್ಲಿ ಹಿಂದು ಮುಸ್ಲಿಂ ವಾಸ್ತುಶೈಲಿಯ ಲಕ್ಷಣಗಳನ್ನು ಅಳವಡಿಸಿಕೊಳ್ಳಲಾಗಿದೆ. ಈ ವರೆಗೆ ಬೆಳಕಿಗೆ ಬಾರದ ಅನೇಕ ಅಂಶಗಳನ್ನು ಇಂಡೋ-ಇಸ್ಲಾಮಿಕ್ ಶೈಲಿಯ ಮೂಲಕ ಗುರುತಿಸಲಾಗಿದ್ದು. ವಿಜಯನಗರ ಕಾಲದಲ್ಲಿ ಮಹಮದೀಯರನ್ನು ಕುರಿತಂತೆ ಒಂದು ಶಾಸನ ಬೆಳಕು ಚೆಲ್ಲುತ್ತದೆ. ಇದು ರಾಜಧಾನಿಯ ಕೇಂದ್ರದಿಂದ ಉತ್ತರಕ್ಕೆ ಇರುವ ಮಸೀದಿಯ ಬಳಿ ದೊರೆತಿದೆ. ಈ ಶಿಲಾ ಶಾಸನದಲ್ಲಿ ಕಟ್ಟಡ ನಿರ್ಮಾಣಕ್ಕೆ ಪ್ರೋತ್ಸಾಹಿಸಿದವರ ಹೆಸರು ಅಹಮದ್ ಖಾನ್ ಎಂಬ ಸಂತನ ಬಗ್ಗೆ ಮತ್ತು ನಿರ್ಮಾಣವು ೧೪೩೯ ಇಸ್ವಿ ಎಂದು ಉಲ್ಲೇಖಿಸಲಾಗಿದೆ. ಆಗ ವಿಜಯನಗರವನ್ನು ಆಳುತ್ತಿದ್ದ ಸಂಗಮ ದೊರೆ ಎರಡನೆಯ

ದೇವರಾಯ ಎಂಬುದು ತಿಳಿದುಬರುತ್ತದೆ. ವಿಜಯನಗರ ಕಾಲದಲ್ಲಿ ಮಹಮದೀಯರ ಪಾತ್ರ ಇಲ್ಲಿ ಹೆಚ್ಚು ಪರಿಗಣನಾರ್ಹವಾದ ಅಂಶವಾಗಿ ಕಂಡುಬರುತ್ತದೆ. ಹಿಂದೂ-ಮುಸ್ಲಿಮರ ಸೌಹಾರ್ದತೆ ಈ ಕಾಲದ ಅರಸರು ಅವರಿಗೆ ಕೊಟ್ಟ ಪ್ರೋತ್ಸಾಹವು. ಐತಿಹಾಸಿಕ ಅಂಶಗಳಿಂದ ಪರಿಗಣಿಸುವುದು ಹೆಚ್ಚು ಔಚಿತ್ಯಪೂರ್ಣವಾದದ್ದು. ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಉಗಮ ಮತ್ತು ವಿಕಾಸ ಈ ವಾಸ್ತುಶೈಲಿಯ ಲಕ್ಷಣಗಳು, ದಕ್ಷಿಣ ಭಾರತ, ವಿಜಯನಗರ ಕಾಲದಲ್ಲಿ ಈ ವಾಸ್ತುಶೈಲಿಯ ಲಕ್ಷಣಗಳನ್ನು ಇಲ್ಲಿ ಅವಲೋಕಿಸಬಹುದು. ವಿಜಯನಗರದಲ್ಲಿ ಕಾಣಸಿಗುವ ಗುಮ್ಮಟಗಳು, ಬಹುಮನಿ ಶೈಲಿಯನ್ನು ಹೋಲುವುದಷ್ಟೇ ಅಲ್ಲ ಹೆಚ್ಚು-ಕಡಿಮೆ ಅದೇ ಸಮಯದಲ್ಲಿ ನಿರ್ಮಾಣಗೊಂಡಿವೆ ಎಂದು ತಿಳಿದುಬಂದರೂ ಕೆಲವು ಲಕ್ಷಣಗಳಲ್ಲಿ ಭಿನ್ನತೆ ಇದ್ದದ್ದು ಎದ್ದು ಕಾಣುತ್ತದೆ. ಅವರ ಪ್ರಭಾವವೇ ಇಲ್ಲಿ ಮುಖ್ಯವೇ ಹೊರತು ಕಾಲಮಾನವಲ್ಲ. ಹಾಗಾಗಿ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಸ್ಮಾರಕಗಳನ್ನು ಹಂಪಿ ಪರಿಸರದಲ್ಲಿ ನಿರ್ಮಿಸಿರುವ ಉದ್ದೇಶ, ರಚನೆಯ ಲಕ್ಷಣಗಳು, ಆ ಕಾಲದ ಜನಜೀವನ ಕುರಿತ ಮಾಹಿತಿಯನ್ನು ಸಂಕ್ಷಿಪ್ತವಾಗಿ ವಿಶ್ಲೇಷಿಸಲಾಗಿದೆ.

ದಕ್ಷಿಣ ಭಾರತ ಹಾಗೂ ಕರ್ನಾಟಕದಲ್ಲಿನ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿ ಸ್ಮಾರಕಗಳ ಪೈಕಿ ಹಂಪಿ ಪರಿಸರದ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಸ್ಮಾರಕಗಳು ವಿಶೇಷವಾಗಿ ಕಂಡುಬರುತ್ತದೆ. ಇದಕ್ಕೆ ಆ ಕಾಲದ ಅರಸರ ಉದಾರ ಪ್ರೋತ್ಸಾಹ ರಚನಾಕೌಶಲ್ಯವೇ ಕಾರಣ ಎಂದು ತಿಳಿದುಬರುತ್ತದೆ. ಹಂಪಿಯಲ್ಲಿ ಕೋಟೆಯ ಆವರಣದಲ್ಲಿ ಒಳಗಡೆ ನಗರ, ಪ್ರದೇಶದಲ್ಲಿ, ಕಡ್ಡಿರಾಮಪುರ ಗ್ರಾಮದ ಹೊರಗಡೆ ಸುಮಾರು ೨ ಕಿ.ಮೀ ದೂರದಲ್ಲಿ ಕೇಂದ್ರದಿಂದ ಪಶ್ಚಿಮಕ್ಕೆ ವಿಜಯನಗರ ರಾಜಧಾನಿಯಾದ ಹಂಪಿಯಲ್ಲಿ ಕಂಡುಬರುವ ಸ್ಮಾರಕಗಳು ಹೊಸಪೇಟೆ ನಗರದ ವಾಯುವ್ಯಕ್ಕೆ ಸುಮಾರು ೧೦ ಕಿ.ಮೀ ದೂರದಲ್ಲಿ ವಿಜಯನಗರ ವ್ಯಾಪ್ತಿಯಲ್ಲಿ ಕಂಡುಬರುವ ಸ್ಮಾರಕಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ಅದೇ ರೀತಿಯಲ್ಲಿ ಹಂಪಿಯೇತರ ಪ್ರದೇಶದಲ್ಲಿಕಂಡುಬರುವ ಇಂಡೋ-ಇಸ್ಲಾಮಿಕ್ ಶೈಲಿಯ ಸ್ಮಾರಕಗಳನ್ನು ಆನೆಗೊಂದಿ, ಚಂದ್ರಗಿರಿ, ಪೆನುಗೊಂಡ, ಕಮಲಾಪುರ, ಮಲಪನಗುಡಿ ಇತ್ಯಾದಿ ಸ್ಥಳಗಳಲ್ಲಿ ಗುರುತಿಸಿ ಈ ಅಧ್ಯಯನಕ್ಕೆ ಪರಿಗಣಿಸುವುದು ಔಚಿತ್ಯಪೂರ್ಣವಾಗಿ ಕಂಡುಬರುತ್ತದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನವನ್ನು ತಿಳಿಸಲಾಗಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿ ಕ್ರಿ.ಶ ೧೩೩೬ ರಿಂದ ೧೫೬೫ರವರೆಗಿನ ಕಾಲಮಾನವನ್ನು ಒಳಗೊಂಡಿದೆ. ಇಲ್ಲಿ ಹಂಪಿ ಪರಿಸರ ಎಂದು ಇಟ್ಟುಕೊಂಡಿದ್ದರೂ ಸಮಗ್ರ ವಿಷಯದ ಸಂಗ್ರಹ ಮತ್ತು ವಿಶ್ಲೇಷಣೆಗಾಗಿ ಹಂಪಿಯೇತರ ಸ್ಮಾರಕಗಳನ್ನು ಇಲ್ಲಿ ಪರಿಗಣಿಸಲಾಗಿದೆ.

ಅಧ್ಯಾಯ ಎರಡರಲ್ಲಿ ವಿಜಯನಗರ ಕಾಲದ ಸಂಕ್ಷಿಪ್ತ ಇತಿಹಾಸವನ್ನು ತಿಳಿಸಲಾಗಿದೆ. ಜೊತೆಗೆ ವಿಜಯನಗರ ಸಾಮ್ರಾಜ್ಯವನ್ನು ಅನ್ಯರ ದಾಳಿಯನ್ನು ತಡೆಗಟ್ಟಲು ಹಾಗೂ ೧೪ನೆಯ ಶತಮಾನದಲ್ಲಿ

ದಕ್ಷಿಣ ಭಾರತದಲ್ಲಿ ದುರ್ಬಲಗೊಂಡ ಸಾಮಂತ ದೊರೆಗಳನ್ನು ಬಡಿಗೊತ್ತುವ ಉದ್ದೇಶವಿತ್ತು. ಸಂಗಮ ವಂಶದ ಸಹೋದರರಿಂದ ಸ್ಥಾಪನೆಗೊಂಡ ವಿಜಯನಗರ ಸಾಮ್ರಾಜ್ಯ ನಾಲ್ಕು ಮನೆತನಗಳು ಒಟ್ಟು ೨೫೦ ವರ್ಷಗಳವರೆಗೆ ಆಳಿದವು. ಭವ್ಯ ಸಂಸ್ಕೃತಿಯನ್ನು ಬೆಳಗಿಸಿದ ಕೀರ್ತಿಗೆ ಪಾತ್ರವಾಗಿರುವ ಕೆಲವು ಸಂಗತಿಗಳನ್ನು ಇಲ್ಲಿ ವಿಶ್ಲೇಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ದೊರೆತ ವಿಜಯನಗರ ಕಾಲದಲ್ಲಿ ಮಹಮದೀಯರ ಪಾತ್ರವಿದ್ದ ಬಗೆಯನ್ನು ಇಲ್ಲಿ ದೊರೆತ ಶೋಧನೆಗಳಿಂದ ಪರಿಚಯಿಸಲಾಗಿದೆ. ಹಾಗೆಯೇ ಹಿಂದೂ ಮುಸ್ಲಿಮರ ಸೌಹಾರ್ದತೆಯು ವಿಜಯನಗರದ ಕಾಲದಲ್ಲಿ ಮುಸ್ಲಿಮರಿಗೆ ಎಲ್ಲಾ ಕ್ಷೇತ್ರಗಳಲ್ಲಿ ಅವಕಾಶವಿತ್ತು. ಈ ಕಾಲದ ಅರಸರು ಉದಾರವಾದ ಭಾವನೆಯಿಂದ ಹಿಂದೂ ಮುಸ್ಲಿಮರ ಸೌಹಾರ್ದತೆಗೆ ನಾಂದಿ ಹಾಡಿದ್ದರು.

ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಉಗಮ ವಿಕಾಸ ಮತ್ತು ಲಕ್ಷಣಗಳನ್ನು ಅಧ್ಯಾಯ ಮೂರರಲ್ಲಿ ಚರ್ಚಿಸಲಾಗಿದೆ. ಈ ಶೈಲಿಯ ಲಕ್ಷಣಗಳು ಹಿಂದೂ-ಮುಸ್ಲಿಂ ವಾಸ್ತು ಅಂಶಗಳ ಚತುರ ಸಂಯೋಜನೆ ಕಟ್ಟಡದ ಆಕಾರ ಚಿತ್ರಗಳಿಗಿಂತ ಅಲಂಕರಣಕ್ಕೆ ಪ್ರಾಧಾನ್ಯತೆ ಕಮಾನು, ಗುಮ್ಮಟ, ಮಿನಾರ್‌ಗಳ ರಚನೆ, ಗೆಚ್ಚು-ಗಾರೆಗಳ ಬಳಕೆ ನಯವಾದ ಗಿಲಾಯಿ ಕೆಲಸ ವಿಜಯನಗರದಲ್ಲಿ ಇಂಡೋ-ಇಸ್ಲಾಮಿಕ್ ಲಕ್ಷಣಗಳ ಪ್ರಭಾವವು ಇಲ್ಲಿ ಅದ್ಭುತ ಹಾಗೂ ಮನಮೋಹಕವಾಗಿರುವುದು ಸ್ಮರಣೀಯ.

ಅಧ್ಯಾಯ ನಾಲ್ಕರಲ್ಲಿ ಹಂಪಿ ಪರಿಸರದ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ಶೈಲಿಯ ಸ್ಮಾರಕಗಳು ಹಂಪಿ, ಕಡ್ಡಿರಾಮಪುರ, ಹೊಸಪೇಟೆ, ಕಮಲಾಪುರ, ಮಲಪನಗುಡಿ, ಆನೆಗೊಂದಿ ಮುಂತಾದ ಪ್ರದೇಶದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಈ ಎಲ್ಲಾ ಕಾರಣಗಳಿಂದ ವಿಶ್ವ ಪರಂಪರೆಯ ಪಡೆದ ಸ್ಮಾರಕಗಳ ಪಟ್ಟಿಯಲ್ಲಿ ಹಂಪಿಯು ಒಂದಾಗಿ ಸೇರ್ಪಡೆಗೊಂಡಿದೆ.

ಹಂಪಿಯೇತರ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ಶೈಲಿಯ ಸ್ಮಾರಕಗಳು ಪೆನುಗೊಂಡ, ಚಂದ್ರಗಿರಿ, ಕನಕಗಿರಿ ಮೊದಲಾದ ಸ್ಥಳಗಳಲ್ಲಿರುವುದನ್ನು ಇಲ್ಲಿ ಅಧ್ಯಾಯ ಐದರಲ್ಲಿ ಬೆಳಕಿಗೆ ತರಲಾಗಿದೆ.

ಅಧ್ಯಾಯ ಆರರಲ್ಲಿ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿ ಮತ್ತು ಆ ಕಾಲದ ಜನಜೀವನ ಕುರಿತು ವಿಶ್ಲೇಷಿಸಲಾಗಿದೆ. ವಿಜಯನಗರ ಸಾಮ್ರಾಜ್ಯದ ಅರಸರು ಅನೇಕ ಇಸ್ಲಾಮಿಕ್ ಸ್ಮಾರಕಗಳನ್ನು ಕಟ್ಟಲು ಅನುಮತಿಯನ್ನು ಕೊಟ್ಟಿದ್ದ ಬಗ್ಗೆ ಹಂಪಿ ಪರಿಸರದ ಆಸುಪಾಸಿನಲ್ಲಿ ಅನೇಕ ಸ್ಮಾರಕಗಳ ಆವಾಸ ಕೇಂದ್ರವಾಗಲು ಈ ಅರಸರ ಕಲಾಪೋಷಣೆಯೇ ಕಾರಣ. ಅರಸರು ಮುಸ್ಲಿಮರಿಗೆ ಕೊಟ್ಟ ಪ್ರೋತ್ಸಾಹ, ಮುಸ್ಲಿಂ ಸೈನಿಕರನ್ನು ತಮ್ಮ ಸೇನೆಯಲ್ಲಿ ಸೇರಿಸಿಕೊಂಡಿದ್ದರು. ಸಾಮ್ರಾಜ್ಯದಲ್ಲಿ ಮುಸ್ಲಿಮರನ್ನು ಮುಕ್ತವಾಗಿ ಸಂಚರಿಸಲು ಮತ್ತು ಎಲ್ಲಾ ರೀತಿಯಿಂದಲೂ ಮುಸ್ಲಿಮರಿಗೆ ಈ ಸಾಮ್ರಾಜ್ಯದಲ್ಲಿ ಅವಕಾಶವಿತ್ತು. ಈ ಕಾಲದ ಅರಸರು ಹಿಂದೂ ಮುಸ್ಲಿಮರನ್ನು ಐಕ್ಯತಾ ದೃಷ್ಟಿಯಿಂದ ಕಂಡರು. ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪದ ಮೂಲಕ ಆ ಕಾಲದ ಜನಜೀವನ ಜಾತ್ಯಾತೀತ ಮನೋಭಾವ, ನಾಗರೀಕತೆ, ಸಂಸ್ಕೃತಿಯ ಔನ್ನತ್ಯವನ್ನು ಗ್ರಹಿಸಬಹುದಾಗಿದೆ.

ಹಂಪಿಯ ಇಂದಿನ ಪರಿಸ್ಥಿತಿಗೆ ಅನೇಕ ಕಾರಣಗಳಿವೆ. ಅವುಗಳಲ್ಲಿ ಒಂದು ಬಹಮನಿ ಸುಲ್ತಾನರು ಮತ್ತು ಸೈನಿಕರ ದುಷ್ಕೃತ್ಯಕ್ಕೆ ಕಾರಣವಿಲ್ಲ. ಅವರು ಕೊಂಡೊಯ್ಯಲು ಏನೇನು ಉಳಿದಿರಲಿಲ್ಲ. ಯುದ್ಧದ ನಂತರ ವಿಜಯನಗರ ಅರಸರು ಅದರ ಬೊಕ್ಕಸವನ್ನು ಬಂಗಾರ, ವಜ್ರ ಮತ್ತು ಇನ್ನಿತರ ಬೆಲೆಬಾಳುವ ಹರಳುಗಳ ರೂಪದಲ್ಲಿ ಸುಮಾರು ೫೫೦ ಆನೆಗಳ ಮೇಲೆ ಹೇರಿಕೊಂಡು ಒಂದು ನೂರು ದಶಲಕ್ಷ ನಾಣ್ಯಗಳನ್ನು ಮತ್ತು ಅತ್ಯಂತ ಬೆಲೆಬಾಳುವ ರತ್ನ ಖಚಿತ ಸಿಂಹಾಸನವನ್ನು ಪೆನುಗೊಂಡ ಕೋಟೆಗೆ ಹೊತ್ತೊಯ್ದರು ಎಂದು ತಿಳಿದುಬರುತ್ತದೆ.

ಇದರ ನಂತರ  ಸುಮಾರು ನಾಲ್ಕು ದಿನಗಳ ಕಾಲ ಕಳ್ಳಕಾಕರ ಗುಂಪುಗಳಾದ ಪಿಂಜಾರಿಗಳ, ಲಂಬಾಡಿಗಳು, ಕುರುಬರು ಈ ದುರಾದೃಷ್ಟ ನಗರದ ಮೇಲೆ ಮುಗಿಬಿದ್ದು ಅಂಗಡಿ ಮತ್ತು ಸಂಪದ್ಭರಿತ ಹಡಗುಗಳನ್ನು ದೋಚಿದರು. ಇದಾದ ನಂತರ ಬಹಮನಿ ಸೈನ್ಯವು ನಗರವನ್ನು ಪ್ರವೇಶಿಸಿತು. ಮತ್ತು ಅವರಿಗೆ ದೋಚಲು ಮತ್ತು ಕೊಂಡೊಯ್ಯಲು ಏನೇನು ಹೆಚ್ಚಿನದು ಉಳಿದಿರಲಿಲ್ಲ. ಆದ್ದರಿಂದ ಹಂಪಿಯ ಇಂದಿನ ದುಃಸ್ಥಿತಿಗೆ ಸಂಪೂರ್ಣವಾಗಿ ಬಹಮನಿ ಸುಲ್ತಾನರಾಗಲಿ ಅಥವಾ ಸೈನಿಕರು ಮಾತ್ರ ಕಾರಣಕರ್ತರಲ್ಲ ಕಾಲದ ಹೊಡೆತಕ್ಕೆ ನಿಸರ್ಗ, ಮಾನವ ದುರಾಸೆ ಮತ್ತು ನಿರ್ಲಕ್ಷ್ಯ ಮೊದಲಾದವುಗಳು ಮಹತ್ವದ ಪಾತ್ರವಹಿಸಿವೆ ಎಂಬುದನ್ನು ಪ್ರೊ ಎಸ್.ಎ.ಬಾರಿ ಅವರ ಇತಿಹಾಸಕಾರರ ನಿಲುವು ಆಗಿದೆ.

ಅದೇ ರೀತಿಯಲ್ಲಿ ಸಾಮಾನ್ಯ ಜನರ ಅಭಿಪ್ರಾಯದಲ್ಲಿ ಶಾಹಿ ಸುಲ್ತಾನರು ವಿಜಯನಗರವನ್ನು ದಾಳಿ ಮಾಡಿ ಸಾಮ್ರಾಜ್ಯ ನ್ನು ನಾಶಪಡಿಸಿದ ಬಗ್ಗೆ ಜನರ ಅಭಿಮತವನ್ನು ತಳ್ಳಿಹಾಕುವಂತಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ವಿಜಯನಗರ ಕಾಲದಲ್ಲಿ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪವು ಹಿಂದೂಮುಸ್ಲಿಮರ ಸಂಸ್ಕೃತಿಯ ಸಮ್ಮಿಲನದ ಸಂಕೇತವಾಗಿದೆ. ಇಂಡೋ-ಇಸ್ಲಾಮಿಕ್ ಒಂದು ಹೊಸ ಶೈಲಿಯನ್ನು ಅಳವಡಿಸಿಕೊಂಡು ವಿಜಯನಗರ ಸಾಮ್ರಾಜ್ಯದಲ್ಲಿ ಅನೇಕ ಇಸ್ಲಾಮಿಕ್ ವಾಸ್ತುಶೈಲಿಯ ಕಟ್ಟಡಗಳು ನಿರ್ಮಾಣವಾಗಿವೆ. ಧಾರ್ಮಿಕ, ಆರ್ಥಿಕ, ರಾಜಕೀಯ, ಸಾಮಾಜಿಕ, ರಕ್ಷಣೆ ಕ್ಷೇತ್ರದಲ್ಲಿ ಹಿಂದೂ ಮುಸ್ಲಿಮರಲ್ಲಿದ್ದ ಸೌಹಾರ್ದತೆ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪವನ್ನು ಬೆಳೆಸುವಲ್ಲಿ ಸಹಕಾರಿಯಾಗಿದೆ. ವಿಜಯನಗರದ ಅರಸರು ಇಸ್ಲಾಮಿಕ್ ಕಲೆಗೆ ಕೊಟ್ಟ ಪ್ರೋತ್ಸಾಹ ಅಮೂಲ್ಯವಾದದ್ದು. ಹೀಗೆ ಈ ಸಾಮ್ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪವು ಪರಿಣಾಮಕಾರಿಯಾಗಿ ಪ್ರಭಾವ ಬೀರಿತ್ತು ಎಂಬುದನ್ನು ಪರಿಗಣಿಸುವುದು ಔಚಿತ್ಯವಾಗಿದೆ. ಧಾರ್ಮಿಕ ಸ್ಮಾರಕಗಳಿಂತಲೂ ನಾಗರಿಕ ಮತ್ತು ರಕ್ಷಣಾ ದೃಷ್ಟಿಯಿಂದ ಇಂಡೋ-ಇಸ್ಲಾಮಿಕ್ ವಾಸ್ತುಶೈಲಿಯ ಸ್ಮಾರಕಗಳನ್ನು ಕಟ್ಟಿಸಿರುವುದು ಸಾಮ್ರಾಜ್ಯದ ಅಭ್ಯುದಯಕ್ಕಾಗಿ ಎಂಬುದು ಶ್ಲಾಘನೀಯ.

# ಗ್ರಂಥಋಣ


೧. ಅದೃಶ್ಯ ಕವಿ (೧೫೨೫) : ೧೯೫೭, **ಪ್ರೌಢ ದೇವರಾಯನ ಕಾವ್ಯ**, ಮುರುಘಾಮಠ, ಧಾರವಾಡ

೨. ಅಳವಂಡಿ ಲಕ್ಷ್ಮಣ್ : ೧೯೯೮, **ಇತಿಹಾಸ ಕೋಶ ೨**, ಕಾವ್ಯಶ್ರೀ ಪ್ರಕಾಶನ ಅಳವಂಡಿ, ಕೊಪ್ಪಳ ಜಿಲ್ಲೆ

೩. ಆಚಾರ್ಯ ಎ.ಎಸ್.ಎಸ್ : ೧೯೮೩, **ಕೃಷ್ಣದೇವರಾಯನ ದಿನಚರಿ**, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೪. ಎಚ್ಚೆಸ್ಕೆ : ೧೯೮೫, **ಅವಲೋಕನ ಕರ್ನಾಟಕದ ಪರಂಪರೆಯ ಸಮೀಕ್ಷೆ**, (ಮುಸ್ಲಿಂ ವಾಸ್ತುಶಿಲ್ಪ, ಜಿ.ಆರ್.ರಂಗಸ್ವಾಮಯ್ಯ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೫. ಎಚ್ಚೆಸ್ಕೆ : ೧೯೮೫, **ಅವಲೋಕನ ಕರ್ನಾಟಕದ ಪರಂಪರೆಯ ಸಮೀಕ್ಷೆ**, (ಮುಸ್ಲಿಂ ವಾಸ್ತುಶಿಲ್ಪ, ಎಂ.ವಿ.ಶ್ರೀನಿವಾಸ್), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೬. ಕಲಬುರ್ಗಿ ಎಂ.ಎಂ. : ೧೯೯೪, **ಕರ್ನಾಟಕದ ಕೈಫಿಯತ್ತುಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭. ಕಲಬುರ್ಗಿ ಡಾ ಎಂ.ಎಂ, ೨೦೦೪, **ಮಾರ್ಗ ೪**, ಸಪ್ನ ಬುಕ್ ಹೌಸ್, ಬೆಂಗಳೂರು

೮. ಕೊಟ್ರಯ್ಯ ಸಿ.ಟಿ.ಎಂ. : ೧೯೯೭, **ಹಂಪೆ ಶಿಲಾಯುಗ ಸಂಸ್ಕೃತಿ ಕ್ರಿಸ್ತಶತಾಬ್ದಿ ಆರಂಭ ಶಾಸನಗಳಲ್ಲಿ ಶರಣರ ಸುಭಾಷಿನಿ ಬಳಗ**, ಹೊಸಪೇಟೆ

೯. ಕೃಷ್ಣಪ್ಪ ಎಂ.ವಿ ಸಿ.ಎಸ್.ಪಾಟೀಲ್ : ೧೯೯೯, **ವಿಜಯನಗರ ಅಧ್ಯಯನದ ಸಂ ೪**, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೧೦. ಕೃಷ್ಣಪ್ಪ ಎಂ.ವಿ, ಸಿ.ಎಸ್.ಪಾಟೀಲ್ : ೧೯೯೯, ವಿಜಯನಗರ ಅಧ್ಯಯನದ ಸಂ ೫, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೧೧. ಕೃಷ್ಣಪ್ಪ ಎಂ.ವಿ, ಸಿ.ಎಸ್.ಪಾಟೀಲ್ : ೨೦೦೧, ವಿಜಯನಗರ ಅಧ್ಯಯನದ ಸಂ ೬, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೧೨. ಕೃಷ್ಣರಾವ್ ಎಂ.ವಿ ಮತ್ತು ಕೇಶವ ಭಟ್ಟ, ಎಂ. : ೧೯೭೦, **ಕರ್ನಾಟಕದ ಇತಿಹಾಸ ದರ್ಶನ**, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಚಾಮರಾಜಪೇಟೆ, ಬೆಂಗಳೂರು

೧೩. ಗುಂಡಪ್ಪ ಶ್ರೀ ಎಸ್ ಇತರರು : ೧೯೭೦, **ಕರ್ನಾಟಕದ ಪರಂಪರೆ, ಸಂಪುಟ ೨**, ಮೈಸೂರು ರಾಜ್ಯ ಸರಕಾರ

೧೪. ಗೋಪಾಲ ಆರ್ ಇತರರು : ೨೦೦೫, **ವಿಜಯನಗರ ಅಧ್ಯಯನದ ಸಂಪುಟ ೧೦,** ಕರ್ನಾಟಕ ಸರಕಾರ ಮೈಸೂರು

೧೫. ಗೋಪಾಲ ಬಾ.ರಾ : ೧೯೭೫, **ವಿಜಯನಗರ ಕಾಲದ ವಾಸ್ತುಶಿಲ್ಪ,** ಬಾ. ಪಿಬಿಎಚ್ ಪ್ರಕಾಶನ

೧೬. ಚಿದಾನಂದಮೂರ್ತಿ ಎಂ. : ೨೦೦೪, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಸಪ್ನ ಬುಕ್ ಹೌಸ್, ಬೆಂಗಳೂರು

೧೭. ಚಿನ್ನಸ್ವಾಮಿ ಸೋಸಲೆ : ೨೦೦೪, **ಸಾಮ್ರಾಜ್ಯ ಮತ್ತು ಸಂಸ್ಥಾನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೧೮. ಚೆಲುವರಾಜು : ೨೦೦೦, **ಹಂಪಿಯ ಸ್ಮಾರಕಗಳಲ್ಲಿ ಜನಪದೀಯ ಅಂಶಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೯. ಜಯತೀರ್ಥ ರಾಜಪುರೋಹಿತ : ೧೯೭೫, **ಕನಕಗಿರಿ ದರ್ಶನ,** ಎಬಿಎಚ್ ಪ್ರಕಾಶನ ಗಾಂಧಿನಗರ, ಬೆಂಗಳೂರು

೨೦. ತಿಪ್ಪೇರುದ್ರಸ್ವಾಮಿ ಡಾ.ಎನ್ : ೧೯೯೭, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಡಿ.ವಿ.ಕೆ.ಮೂರ್ತಿ, ಪ್ರಕಾಶಕರು, ಮೈಸೂರು ೦೪

೨೧. ದೀಕ್ಷಿತ್ ಜಿ.ಎಸ್ : ೧೯೯೧, **ಸಂಗಮರ ಕಾಲದ ವಿಜಯನಗರ,** ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೨೨. ದೇಸಾಯಿ ಪಿ.ಬಿ : ೧೯೩೬, **ವಿಜಯನಗರ ಸಾಮ್ರಾಜ್ಯ ೧೩೩೬-೧೬೪೧,** ವಿಜಯನಗರ ಸ್ಮಾರಕೋತ್ಸವ ಮಂಡಲ ಧಾರವಾಡ

೨೩. ದೇವಕುಂಜರಿ : ೧೯೮೩, **ಹಂಪಿ,** ಭಾರತ ಪುರಾತತ್ವ ಸರ್ವೇಕ್ಷಣ, ನವದೆಹಲಿ

೨೪. ದೇವರಾಜ್ ಅಂಡ್ ಪಾಟೀಲ್ ಸಿ.ಎಸ್ : ೧೯೯೧, **ವಿಜಯನಗರ ಪ್ರೋಗ್ರೆಸ್ ಆಫ್ ರಿಸರ್ಚ್**

೨೫. ದೇವರಕೊಂಡಾರೆಡ್ಡಿ ಡಾ. : ೨೦೦೬, **ಹಂಪಿ ಸಂಪುಟ,** (ವಿಜಯನಗರ ಶಾಸನಗಳಲ್ಲಿ ಕುಸ್ತಿಯ ಉಲ್ಲೇಖಗಳು, ಜೈನುಲ್ಲಾ ಬಳ್ಳಾರಿ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೬. ದೇವರಾಜ್ ಡಿ.ವಿ, ಡಾ.ಚನ್ನಬಸಪ್ಪ ಎಸ್.ಪಾಟೀಲ್ : ೧೯೯೭, **ವಿಜಯನಗರ ಅಧ್ಯಯನ ಸಂ ೧,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು

೨೭. ದೇಸಾಯಿ ಪಾಂಡುರಂಗ : ೨೦೦೩, **(ಮರುಮುದ್ರಣ) ಹಂಪಿ,** ಸಪ್ನ ಬುಕ್ ಹೌಸ್, ಬೆಂಗಳೂರು

೨೮. ದೇಸಾಯಿ ಪಾಂಡುರಂಗ : ೨೦೦೩, **ಹಂಪಿ,** ಸಪ್ನ ಬುಕ್ ಹೌಸ್, ಬೆಂಗಳೂರು

೨೯. ನಂಜುಂಡಸ್ವಾಮಿ ಪಿ.ಎಸ್ : ೧೯೭೧, **ವಿಜಯನಗರದ ಇತಿಹಾಸ,** ಧಾರವಾಡ ಸಮಾಜ ಪುಸ್ತಕಾಲಯ

೩೦. ನಾಗರಾಜ್ ಎಂ.ಜಿ, ಪಿ.ವಿ.ಕೃಷ್ಣಮೂರ್ತಿ : ೧೯೯೮, **ಇತಿಹಾಸ ದರ್ಶನ ಸಂ ೧೨,** ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು

೩೧. ನಾಗರಾಜ್ ಎಂ.ಜಿ, ಪಿ.ವಿ.ಕೃಷ್ಣಮೂರ್ತಿ : ೧೯೯೮, **ಇತಿಹಾಸ ದರ್ಶನ ಸಂ ೧೩,** ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು

೩೨. ನಾಗರಾಜು ಎಚ್.ಎಂ : ೧೯೯೯, **ವಿಜಯನಗರ ಇಮ್ಮಡಿ ದೇವರಾಯ,** ಶಿವರಾಂ ಪೇಟೆ ಮೈಸೂರು

೩೩. ನಾಗರಾಜ್ ಎಂ.ಜಿ, ಪಿ.ವಿ.ಕೃಷ್ಣಮೂರ್ತಿ : ೨೦೦೨, **ಇತಿಹಾಸ ದರ್ಶನ ಸಂ ೧೬,** ಕರ್ನಾಟಕ ಇತಿಹಾಸ ಅಕಾಡೆಮಿ (ರಿ) ಬೆಂಗಳೂರು

೩೪. ನಾಗೇಗೌಡ ಎಚ್.ಎಲ್ : ೧೯೬೬, **ಪ್ರವಾಸಿ ಕಂಡ ಇಂಡಿಯಾ ಸಂ ೨,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೩೫. ನಾಗರಾಜ್ ರಾವ್ ಎಂ.ಎಸ್ : ಅಲೆಕ್ಸಾಂಡರ್ ಜೆ. ಗ್ರೀನ್ ಲಾ (೧೮೫೬), ಜಾನ್ ಗಾರಿಂಗ್ಸ್ ತಂಡ ವಿಜಯನಗರ (೧೯೮೩)
ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ, ನಿರ್ದೇಶನಾಲಯ, ಮೈಸೂರು

೩೬. ಪರಮೇಶ್ವರಪ್ಪ ಟಿ. : ೧೯೯೬, **ಹಂಪಿ ಪರಂಪರೆ,** ಶ್ರೀ ವಿದ್ಯಾವಿಜಯನಗರ ಹಂಪಿ ಹೆರಿಟೇಜ್ ಟ್ರಸ್ಟ್, ಆನೆಗೊಂದಿ, ಹೊಸಪೇಟೆ

೩೭. ಪುಲುಮತಿ ಶ್ಯಾಮರಾವ್ : ೧೯೫೭, **ವಿಜಯನಗರದ ಕಲೆ ಮತ್ತು ಸಾಹಿತ್ಯ,** ಮೈಸೂರು ಸಂಸ್ಥಾನ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಬೆಂಗಳೂರು

೩೮. ಫಿಲಿಯೋಜಾ ವಸುಂಧರಾ : ೨೦೦೦, **ವಿಶ್ವಪರಂಪರೆಯ ಹಾದಿಯಲ್ಲಿ ಹಂಪಿ,** ಕರ್ಮವೀರ ದೀಪಾವಳಿ ವಿಶೇಷಾಂಕ

೩೯. ಫಿಲಿಯೋಜಾ ವಸುಂಧರಾ : ೧೯೯೧, **ವಿಜಯನಗರ ಸಾಮ್ರಾಜ್ಯ ಸ್ಥಾಪನೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೪೦. ಪ್ರಕಾಶ ಎಂ.ಪಿ : ೨೦೦೦, **ಡೊಮಿಂಗೋ ಪಾಯಸಂ ಕಂಡ ವಿಜಯಸಗರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೧. ಬಸವರಾಜ ಮಲಶೆಟ್ಟಿ : ೧೯೮೧, **ಹಂಪೆ ಒಂದು ಪರಿಚಯ,** ಮಹಾಕವಿ ಹರಿಹರ ಸ್ಮಾರಕ ಸಂಶೋಧನ ಕೇಂದ್ರ, ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಹಂಪಿ

೪೨. ಭೂಸನೂರಮಠ ಪ್ರೊ.ಸಂ.ಶಿ.ಎಂ.ಎ : ೧೯೮೮, **ವಿಜಯನಗರ ಕಲ್ಯಾಣ,** ಮಹಾಕವಿ ಹರಿಹರ ಸ್ಮಾರಕ ಸಂಶೋಧನ ಕೇಂದ್ರ ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಮಠ ಹಂಪಿ

೪೩. ಮಹಾದೇವ ಸಿ.ಡಾ., ಡಾ.ಎ.ಸುಬ್ಬಣ್ಣರೈ, ಡಾ. ಮಾಧವ ಪೆರಾಜೆ : ೨೦೦೨, **ಹೊಸಪೇಟೆ ತಾಲೂಕು ದರ್ಶನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೪. ಮಹಾದೇವ ಸಿ. ಡಾ., ಡಾ. ಎಸ್. ಚಿನ್ನಸ್ವಾಮಿ ಸೋಸಲೆ : ೨೦೦೬, **ಹಂಪಿ ಅಂದು - ಇಂದು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೫. ಮಹದೇವ : ೨೦೦೧, **ಕರ್ನಾಟಕ ಪುರಾತತ್ವ ಶೋಧ,** ಶ್ರೀ ಲಕ್ಷ್ಮಿ ಪ್ರಕಾಶನ, ಶ್ರೀರಂಗಪಟ್ಟಣ

೪೬. ಮಂಜುಮ್‌ದಾರ್ ಪಿ.ಆರ್, ಭಾರದ್ವಾಜ್ ಆರ್.ಕೆ.ಚೌದರಿ ಆರ್.ಸಿ : ೧೯೯೯, **ದಕ್ಷಿಣ ಭಾರತದ ಇತಿಹಾಸ,** ಚೇತನ ಬುಕ್ ಹೌಸ್, ಮೈಸೂರು

೪೭. ರಾಘವೇಂದ್ರ ರಾವ್ ಪ್ರೊ ವಿ : ೧೯೪೮, **ವಿಜಯನಗರದ ವಿದ್ಯನಿಧಿ,** ಪ್ರಕಾಶನ, ಮೈಸೂರು

ರಾಬರ್ಟ್ ಸಿವೆಲ್, ಮೂಲ: ಅನು, ಸದಾನಂದ ಕನವಳ್ಳಿ : ೧೯೯೨, **ಮರೆತು ಹೋದ ಮಹಾ ಸಾಮ್ರಾಜ್ಯ ವಿಜಯನಗರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೪೮. ರಾಮಕೃಷ್ಣ ಕೆ.ಆರ್, ಟಿ.ಎಸ್.ಗಂಗಾಧರ, ಟಿ.ಎಂ.ಮಂಜುನಾಥಯ್ಯ : ೨೦೦೭, **ವಿಜಯನಗರ ಅಧ್ಯಯನ ಸಂಪುಟ ೨,** (ಹಂಪಿ ಉತ್ಸವ ೨೦೦೧ರಲ್ಲಿ ಮಂಡಿಸಿದ ಪ್ರಬಂಧಗಳು), ಕರ್ನಾಟಕ ಸರಕಾರ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ

೪೯. ರಾಮಕೃಷ್ಣ ಕೆ.ಆರ್, ಡಾ.ಆರ್.ಗೋಪಾಲ್, ಪಿ.ಎಸ್.ಗಂಗಾಧರ : ೨೦೦೩, **ವಿಜಯನಗರ ಅಧ್ಯಯನ ಸಂ ೮,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ

೫೦. ರಾಮಕೃಷ್ಣ ಕೆ.ಆರ್, ಡಾ.ಆರ್.ಗೋಪಾಲ್, ಪಿ.ಎಸ್.ಗಂಗಾಧರ : ೨೦೦೩, **ವಿಜಯನಗರ ಅಧ್ಯಯನ ಸಂ ೯,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ

೫೧. ಲಕ್ಷ್ಮಣ್ ತೆಲಗಾವಿ ಪ್ರೊ. : ೨೦೦೬, ಕೆ.ರಾಮಸ್ವಾಮಯ್ಯಂಯ್ಯಂಗಾರ್ ಅಪರ ಜೀರ್ಣ ವಿಜಯನಗರ ದರ್ಶನಂ ಹಂಪಿ ಕುರಿತು ಪ್ರಥಮ ಪ್ರವಾಸಿ ಕೈಪಿಡಿ

೫೨. ವಿವೇಕ ರೈ ಡಾ.ಬಿ.ಎ : ೨೦೦೫, **ಪ್ರವಾಸಿ ಕಂಡ ವಿಜಯನಗರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೩. ವೆಂಕಟರಾವ್ ಜಿ. . ೧೯೪೪, ಸ್ಟೇಟಸ್ ಆಫ್ ಮುಸ್ಲಿಂ ಇನ್ ದಿ ವಿಜಯನಗರ ಎಂಪೈರ್, ಇನ್ ದಿ ಪ್ರೋಸಿಡಿಂಗ್ಸ್ ಆಫ್ ದಿ ಇಂಡಿಯನ್ ಹಿಸ್ಟರಿ ಕಾಂಗ್ರೇಸ್, ಸೆವೆಂಥ್ ಸೆಕ್ಷನ್, ಅಲಹಬಾದ್

೫೪. ಸದಾನಂದ ಎಸ್. : ೧೯೬೪-೬೫, **ಇಸ್ಲಾಮಿಕ್ ಇನ್‌ಫ್ಲೂಎನ್ಸ್ ಇನ್ ವಿಜಯನಗರ ಕ್ಯಾಪಿಟಲ್,** ಇನ್.ಜೆ.ಎ.ಎಚ್.ಆರ್.ಎನ್-XXX

೫೫. ಸೂರ್ಯನಾಥ ಕಾಮತ್ ಡಾ. : ೧೯೭೭, **ವಿಜಯನಗರ ಸಾಮ್ರಾಜ್ಯ,** ಪ್ರಕಾಶ ಸಾಹಿತ್ಯ ತಲಕಾಡು ಸುಬ್ಬರಾವ್ ಗಲ್ಲಿ ಅರಳೇಪೇಟೆ, ಬೆಂಗಳೂರು

೫೬. ಸೂರ್ಯನಾಥ ಕಾಮತ್ ಡಾ., ದೇವರಕೊಂಡಾರೆಡ್ಡಿ ಡಾ., ೧೯೯೪, **ಇತಿಹಾಸ ದರ್ಶನ ಸಂಪುಟ ೯,** ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು

೫೭. ಸೂರ್ಯನಾರಾಣ ರಾವ್ ಬಿ. ಮೂಲ ಅನು: ಬಾಲಸುಬ್ರಹ್ಮಣ್ಯ : ೨೦೦೦, **ಮರೆಯಲಾಗದ ಮಹಾಸಾಮ್ರಾಜ್ಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೮. ಸೋಮಶೇಖರ್ ಎಸ್.ವೈ., : **ಹಂಪಿಯ ಬಜಾರುಗಳು,** ೧೯೯೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೯. ವಿವೇಕ ರೈ ಡಾ.ಬಿ.ಎ : ೨೦೦೫, **ಪ್ರವಾಸಿ ಕಂಡ ವಿಜಯನಗರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬೦. ಶಾಹ ಪಿ.ಯು : ೧೯೫೬, **ವಿಜಯನಗರ ಕಲೆ ಮತ್ತು ಸಾಹಿತ್ಯ,** ಬೆಂಗಳೂರು ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ

೬೧. ಶಿವರುದ್ರಪ್ಪ ಜಿ.ಎಸ್. : ೧೯೭೦, **ಕರ್ನಾಟಕ ಪರಂಪರೆ ಸಂಪುಟ ೨,** ಮೈಸೂರು ರಾಜ್ಯ ಸರಕಾರ

೬೨. ಶ್ರೀನಿವಾಸಚಾರ್ : ೧೯೯೫, **ಹಂಪಿ ವಿಜಯನಗರ ಸಾಮ್ರಾಜ್ಯದ ಪ್ರಖ್ಯಾತ ರಾಜಧಾನಿ,** ಪುರಾತತ್ವ ಮತ್ತು ಸಂಗ್ರಹಾಲಯ ಇಲಾಖೆ, ಕರ್ನಾಟಕ ಸರಕಾರ, ಮೈಸೂರು

೬೩. ಶ್ರೀಕಂಠಯ್ಯ : ೧೯೮೭, **ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ,** ಶೀತಾ ಬುಕ್ ಹೌಸ್, ಮೈಸೂರು

೬೪. ಷೇಕ್ ಅಲಿ ಬಿ. (ಪ್ರಧಾನ ಸಂಪಾದಕರು), ಪ್ರೊ ಕೆ.ಎಸ್.ಶಿವಣ್ಣ : ೧೯೯೭. **ಕರ್ನಾಟಕ ಚರಿತ್ರೆ ಸಂಪುಟ -೪,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬೫. ಷೇಕ್ ಅಲಿ ಬಿ., (ಪ್ರಧಾನ ಸಂಪಾದಕರು), ಪ್ರೊ ಕೆ.ಎಸ್.ಶಿವಣ್ಣ : ೧೯೯೭. **ಕರ್ನಾಟಕ ಚರಿತ್ರೆ ಸಂ ೩,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಇಂಗ್ಲಿಷ್ ಗ್ರಂಥಗಳು


01. George Michell: 1992, **The Vijayanagara Courtly Style,** American Institute of Indian studies, New Delhi.

02. George Michell: 1986, **Islamic Heritage of the Deccan,** mara publication, Delhi.

03. Jose pereira : 1994, **Islamic Sacred Architecture : A Stylistic History,** New Delhi.

04. John M. Fritz and George michell : 1991, **City of Victory Vijayanara,** New Delhi.

05. Anila-verghese : 1995, **Religious Traditions at Vijayanargara As Reveled Through its Monuments** manohar American Institute of Indian Studies, New Delhi.

06. Ziyaud-Din -A Desai; 1986, **Indo-Islamic Architecture,** Publication Division, Ministry of Information and Broadcashing, Government of India, New Delhi.

೧೦. Percy Brown : 1981, **Indian Architecture** (Islamic Period) D.B Taraporevali Sons & Co. Pvt Ltd, Bombay.

೦೭. Madhao P. Patil : 1999, **Court Life Under the Vijayanagara Rulers.** (Vijayanagara & Bahamani Relations), B.R. Publishing corporation E-A division of BRPC (India Ltd), Delhi.

೧೧. Robert sewell : 1991, **A Forgotten Empire** (Vijayanagara), Asian Educational Services (Resived), New Delhi

೦೩. Suryanarayana Rao B. : 1993, **A History of Vijayanagara** : The NEVER TO BE FORGOTTEN Empire, Asian Educational Services, New Delhi.

೦೨. Narasimhaiah B. . 1992, **Metropolis Vijayanagara** (Significance of Remains of citadel), Book India Publishing co, Delhi.

೦೮. J.R.Ramamurthy : 1996-97, **The Vijayanagara Heritage,** Sri Vidhya Vijayanagara Hampi heritage Trust, Anegondi, Hospet.

೧೨. S.A.Bari : 1990, **Indian History & Culture** (Hampi Revisited), Mittal publication New Delhi.

**ಅಪ್ರಕಟಿತ ಆಕಾರಗಳು**

೧. ಎಸ್.ವೈ.ಸೋಮಶೇಖರ್, ೧೯೯೯, **ವಿಜಯನಗರ ಕಾಲದ ಸೈನ್ಯಾ ವ್ಯವಸ್ಥೆ ಮತ್ತು ಯುದ್ಧ ನೀತಿ,** ಪಿಎಚ್.ಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಯು.ಮಲ್ಲಿಕಾರ್ಜುನ, **ಹೊಸಪೇಟೆ ತಾಲೂಕಿನ ಗರಡಿ ಸಂಪ್ರದಾಯ,** (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೩. ಜೆ.ರವೀಂದ್ರಕುಮಾರ್, ೨೦೦೩, **ಮೌಖಿಕ ಚರಿತ್ರೆ ಮತ್ತು ಹಂಪಿ,** ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ವಿರೂಪಾಕ್ಷಿ, ೧೯೯೫, **ಬಳ್ಳಾರಿ ಜಿಲ್ಲೆಯಲ್ಲಿ ಕಲೆಕ್ಟರ್‌ಗಳ ಆಳ್ವಿಕೆ,** ಒಂದು ಸಮೀಕ್ಷೆ, (ಎಂ.ಫಿಲ್ ಅಪ್ರಕಟಿತ ಪ್ರಬಂಧ)

**ಲೇಖನಗಳು**

೧. ಡಾ. ವಿರೂಪಾಕ್ಷಿ ಪೂಜಾರಹಳ್ಳಿ, ೧೯೯೭, **ಕಮಲಾಪುರದ ದಾದಾಪೀರ್ ಛತ್ರ,** ಸಾಪ್ತಾಹಿಕ ಪ್ರಭ ೨.೩.೧೯೯೭

೨. ಮಧು ಬಗರೆ, ೧೯೯೫, **ಮರೆತು ಹೋದ ಸಾಮ್ರಾಜ್ಯ ಅವಸಾನದಂಚಿಗೆ,** ಉದಯವಾಣಿ ದೀಪಾವಳಿ ವಿಶೇಷಾಂಕ

೩. ಬಾಲಸುಬ್ರಹ್ಮಣ್ಯ, ೨೦೦೦, **ಮರೆತ, ಮರೆಯಲಾಗದ ಸಾಮ್ರಾಜ್ಯ,** ಕರ್ಮವೀರ, ದೀಪಾವಳಿ

# ಶಾಸನಗಳು

೧. ದೇವರಕೊಂಡಾರೆಡ್ಡಿ (ಸಂ): ೨೦೦೦, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೩,** (ಹಂಪಿ ಶಾಸನಗಳು) ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೨. ಅದೇ,

೩. ದೇವರಕೊಂಡಾರೆಡ್ಡಿ (ಸಂ): ೨೦೦೪, **ಶಾಸನ ಅಧ್ಯಯನ** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೪. ಚನ್ನಬಸಪ್ಪ ಎಸ್.ಪಾಟೀಲ, ವಿನೋದಾ ಪಾಟೀಲ: ೧೯೯೬, **ವಿಜಯನಗರ ಶಾಸನಗಳು,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೫. ಬಾ.ರಾ. ಗೋಪಾಲ್, ಎಚ್.ಎಸ್. ಗೋಪಾಲರಾವ್, ಡಾ.ಪಿ.ವಿ. ಕೃಷ್ಣಮೂರ್ತಿ: ೨೦೦೦ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ ೪ **ಹಂಪಿ ಶಾಸನಗಳು,** ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೬. ವಿಜಯನಗರ ಅಧ್ಯಯನ ಸಂ ೯, ೨೦೦೪ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಹೊಸಪೇಟೆ.

೭. ವಿಜಯನಗರ ಅಧ್ಯಯನ ಸಂ ೧ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಮೈಸೂರು.

೮. ಎಪಿಗ್ರಾಫಿಯಾ ಕರ್ನಾಟಕ ಶಾಸನ ಸಂಪುಟಗಳು ೧ ರಿಂದ ೧೧ ರ ವರೆಗೆ.




ವಿಜಯನಗರ ನಕ್ಷೆ (ಜಾರ್ಜ್ ಮಿಶೆಲ್ ವಿಜಯನಗರ ಕೋರ್ಟ್ಲಿ ಸ್ಟೈಲ್)




ವಿಜಯನಗರ ಅರಮನೆ ಪ್ರದೇಶದ ಸ್ಮಾರಕಗಳು (ಜಾರ್ಜ್ ಮಿಶೆಲ್ ವಿಜಯನಗರ ಕೋರ್ಟ್ಲಿ ಸ್ಟೈಲ್)




**ಆನೆಗೊಂದಿ ನಕ್ಷೆ** (ಜಾರ್ಜ್ ಮಿಶೆಲ್ ವಿಜಯನಗರ ಕೋರ್ಟ್ಲಿ ಸ್ಟೈಲ್)




# ಚಂದ್ರಗಿರಿ ನಕ್ಷೆ

(ಜಾರ್ಜ್ ಮಿಶೆಲ್ ವಿಜಯನಗರ ಕೋರ್ಟ್ಲಿ ಸ್ಟೈಲ್)


ಅಷ್ಟಭುಜಾಕೃತಿಯ ಕಾವಲು ಗೋಪುರ
ಮಸೀದಿ
ದೇವಸ್ಥಾನಗಳು
ಚೌಕಾಕಾರದ ಆವರಣ
ಗಗನಮಹಲ್
ದೇವಸ್ಥಾನಗಳು
ದೇವಸ್ಥಾನ
ಜಲಾಶಯ
೦
೫೦೦ ಮೀಟರ್

ಪೆನುಕೊಂಡ ನಕ್ಷೆ



ಈಶಾನ್ಯದಲ್ಲಿರುವ ದ್ವಾರ ಬಾಗಿಲು

(ತಳವಾರ್ ಘಟ್ಟ)



ಗುಮ್ಮಟಾಕಾರದ ದ್ವಾರ ಬಾಗಿಲು



ಶಿಥಿಲಗೊಂಡ ದ್ವಾರ ಬಾಗಿಲು



ದ್ವಾರದ ಮನೆ



ಚೌಕಾಕಾರದ ಕಾವಲು ಗೋಪುರ



ಅಷ್ಟಭುಜಾಕೃತಿಯ ಕಾವಲು ಗೋಪುರ



ಎರಡು ಅಂತಸ್ತುಗಳುಳ್ಳ ಆಯತಾಕಾರದ ಕಾವಲು ಗೋಪುರ



ಬಹುಗುಮ್ಮಟಗಳ ಕಾವಲು ಗೋಪುರ



ಆನೆಲಾಯ



ಶೃಂಗಾರ ಕಮಾನುಗಳಿರುವ ಆಡಳಿತ ಮಂಟಪ



ರಾಣಿಯರ ಸ್ನಾನಗೃಹ



ಮಲಪ್ಪ . ಒಡಿಯ ನೈರುತ್ಯದಲ್ಲಿರುವ ಬಾವಿ



ಹೊಸಪೇಟೆಯ ಗುಮ್ಮಟ ರಹಿತ ಗೋರಿ



ಹೊಸಪೇಟೆಯ ಗುಮ್ಮಟದ ಗೋರಿ



ಗುಮ್ಮಟದ ಗೋರಿ



ರಾಜಧಾನಿ ಕೇಂದ್ರಸ್ಥಾನದಿಂದ ಉತ್ತರಕ್ಕಿರುವ ಮಸೀದಿ
(ಅಹಮದ್ ಖಾನ್ ಧರ್ಮಶಾಲೆ)



ಒಂಬತ್ತು ಗುಮ್ಮಟವುಳ್ಳ ಮಂಟಪ



ರಾಜಧಾನಿಯ ಕೇಂದ್ರದಿಂದ ವಾಯುವ್ಯಕ್ಕಿರುವ ಗೋ[illegible]



ಈದ್ಗಾ ಮೈದಾನ, ಕಮಲಾಪುರ

